# ಬಕುಳ ರಾಜಿ

ಕವಿತಾ ಸಂಕಲನ

ಮಲ್ಲಿಕಾ

ಯೇಷಾಂ ಚಿತ್ತೇ ವಸೇದ್ಭಕ್ತಿಃ
ಸರ್ವದಾ ಪ್ರೇಮರೂಪಿಣೀ ।
ನ ತೇ ಪಶ್ಯಂತಿ ಸ್ತ್ರೀನಾಶಂ
ಸ್ವಪ್ನೇಽಪ್ಯಮಲ ಮೂರ್ತಯಃ

# ಬಕುಳ ರಾಜಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

# ಪರಿವಿಡಿ

# ಪ್ರಭು

ಓ, ಕೇಳಿದಿರಾ ! ಪ್ರಭುವಿನಡಿಯು
ಗಲ್‌ಗಲ್ಲೆನುವ ಧೀರ ಬಲ್ಲುಲಿಯು ?
ಎಂದಿನಿಂ ಕೂಗಿ ಕರೆಯುತಿರ್ದುದೀ
ಹೃತ್‌ಬನದ ಕವಿ ಕಮನೀಯವಾಣಿ !

ಬರುತಿಹನೊ ಆತ್ಮಕರೆಯು ಮಾನಿಸಿ
ಲೋಕದ ಕರಕರೆಯು ತೊಡೆಯಲೆಳಸಿ
ಗುರಿಯಿರೆ ಮುಂದೆ ಶ್ರಮ ಗಣಿಸನ್
ಕಠಿಣಮಿರೆ ಹಿಡಿದ ಹಾದಿ ಲೆಕ್ಕಿಸನ್

ಬರುತಿಹನ್ ದಯೆತುಂಬಿ ಹರಸಲೆಂದು
ಲೋಕದ ಕಡುಭಂಗ ಕಳೆಯಲೆಂದು
ಒಮ್ಮೆ ಮೈದೋರಿ ಹರಸೆನ್ನ ಬಂದು
ನೊಂದ ಜೀವ ಜೆಂದು ಬಳಲಿರಲಿಂದು

ನೀನಲ್ಲದಾರ್ ಬಂದು ಪೊರೆವರ್
ಜೀವ ಬಂಧುಗಳೆನಗಿರದಿರುತಿರೆ
ಕರುಣೆದೋರಿ ಬಾರಯ್ಯ ಪ್ರಭುವೆ
ನಿನ್ನ ನಮಿಸಿ ಅನುದಿನವು ಬೇಡುವೆ.

—o—

## ಸಂಭಾವಿತಸ್ಯ ಅಕೀರ್ತಿಃ
## ಮರಣಾದತಿರಿಚ್ಯತೇ ।

ಎಲ್ಲವಗೆಯ ದಾರಿದ್ರ್ಯಗಳಿಗಿಂ
ಮಾನವೀಯತೆಯ ದಾರಿದ್ರ್ಯ ಕಡು
ದುಃಖದ ಕಣಜ ಮನುಕುಲ ಕೋಟಿಗೆ.
ಲೋಕಲಜ್ಜೆಯಿಲ್ಲದಿಹ ಕುಲಜರ್
ಧರ್ಮಭಾವಂ ಕಿಡಿಸಿ ಮನುಕುಲಕೆ
ಅಪಕೀರ್ತಿ ಮಾಲೆ ಸೂಡುವರ್ ಕಣ !
ಭವ ಭಂಗದಿ ಜಗದ ಬೆಳಕಂ ತೋರ್ದ
ಪರಮ ತಂದೆ ತಾಯ್ಗಳ್ ವೃದ್ಧಾಪ್ಯ
ಯೋಗದಿಂ ನರಳುತಿರೆ ನಿರ್ಲಕ್ಷಿಸಿ
ಮರೆದಪರ್ ನೆಣಗೊಬ್ಬಿನೆರ್ದೆಯಿಂ.
ಕುಲದ ಮಾನ ಮರ್ಯಾದೆಗಳಿಂಗೆ
ಮನಗುಡದಿನಿತು ಸ್ವಾರ್ಥಸಾಧನೆಯ
ದುರ್ಮಾರ್ಗವಿಡಿದಪರ್ ಜಗದೊಳ್ ಮನು
ಕುಲಜರೆನಿಪ ನರ ಜಂತುಗಳ್ ಕಣ !
ವೇದವೇದಾಂಗಗಳಲಿ ಚೆನ್ನುಡಿ
ಒಳ್ನುಡಿಗಳ್ ಗ್ರಂಥಸ್ಥಮಿರ್ಪುದ
ಲೆಕ್ಕಿಸದ ಧರ್ಮಹೀನ ನರರ್ಗೆ
ಸನ್ಮತಿಯ ನೀಯ್ವೈ ಹೇ ಸಿರಿದೊರೆಯೆ !
ಕೈಮುಗಿದು ಕಾಲ್ವಿಡಿದು ಬೇಡುವೆನೊ
ಕವಿಹೃದಯ ದ್ರವಿಸಿ ಕರಗುತಿರೆ
ತಾಳಲಾರದೆ ಮತ್ತೆ ಮೇಣ್ಮತ್ತೆ
ಮೊರೆಯಿಡುವೆ ದಯೆದೋರು ದೇವನೇ !

—o—

# ದಯೆಯಿಲ್ಲ-ಮಳೆಯಿಲ್ಲ

ಚೈತ್ರವೈಶಾಖನುಬ್ಬರ ಗಣಿಸಿ
ವಸಂತ ಮೆರೆಯೆ ಪ್ರಭು
ತಾನಾಗಿ ! ಜೇಷ್ಠಆಷಾಢ ಋತು
ರಾಜ ಗ್ರೀಷ್ಮಂ ಗಮಿಸಿ
ಕಾರ್ಮೋಡವ ಬಲಿಸಿದ ಹರುಷದಿಂದೆ.

ಆಗಳೇಂ ವರ್ಷಧಾರೆಯು ಬಯಸಿ
ಒಣ ಜಿಹ್ವೆಯು ಚಾಚಿತು
ಧರಣಿ ಪೇರೊಡಲ ದಾಹವನೆಲ್ಲ
ಒರ್ಮೆಗೇ ಪರಿಹರಿಸುವ
ತೆರಂ. ಆದೊಡಾ ಗ್ರೀಷ್ಮನೊಲಿದನೆ ?

ಗ್ರೀಷ್ಮ ಕರುಣೆದೋರದೆ ಸಾಗಿದನ್
ನಿರ್ದಯೆಯು ಪಟುವಾಗಿ !
ಸು-ಶ್ರಾವಣ ಭಾದ್ರಪದ ವರ್ಷದೊರೆ
ಈವಂ ಸಕಲ ಸುಖವಂ
ದಿವ್ಯವರ್ಷಧಾರೆಯುಲೆಂದೆಂದು !

ಅಂತಿಂತು ವಸಂತ ಋತುರಾಜನ
ನಿಷ್ಕರುಣೆಯು ಬಳುವಳಿ
ಗ್ರೀಷ್ಮಂ ಪಡೆದು ವರ್ಷ ಪ್ರಭುವಿಗೆ
ಈಯುಲಾ ಪ್ರಭುವಿನ
ಧೋರಣೆಯನೇನೆಂಬೆ ಶ್ರೀಹರಿಯೆ !

→

ಬಕುಳ ರಾಜಿ—೩

ದಯೆಯಿಲ್ಲ-ಮಳೆಯಿಲ್ಲ ಎಲ್ಲೆಲ್ಲು
ಮಳೆಯಿಲ್ಲ ನೀರಿಲ್ಲ.
ನೈಮನ ಮುಂದುಡಿ ಸುಟ್ಟು ಉರಿದುರಿದು
ಸೀದು ಹೋಹುತ್ತಲಿದೆ
ಸಕಲ ಜೀವಿಗಳ ಸಹಿತ ವಸುಂಧರೆ !

— o —

## ನಕ್ಷತ್ರಗಳ ಸಭೆ

ಗಗನ ನೀಲ ಭಿತ್ತಿಯ ಮಹಾಪಾರಾವಾರದಲ್ಲಿ
ಜಗಜಗಿಸುತಿವೆ ಅಖಿಲ ನಕ್ಷತ್ರಗಳೋಳಿ !
ಮಿಂಚಿನ ಸಭೆ ನಡೆದಿದೆ ಮೂಕ ಮೌನ ಭಾರದಲಿ ನೋಡ !
ಆದಿ ಅಂತ್ಯವರಿಯದ ವಿಶ್ವ ಸಮ್ಮೇಲನವು
ಕೂಡಿ ನಲಿದಿದೆ ಮಿಂಚಿನ ನಗೆಯನು ತ್ರಿಜಗಕೆ ಚೆಲ್ಲಿ !
ನಿಶಾ ಕಾಳಿಗೆ ವಜ್ರ ವೈಡೂರ್ಯಗಳ ತೊಡಿಸಿ
ಸಿಂಗರಿಸಿದ ಅದ್ಭುತ ಮಿಂಚುಗಳ ಸರಮಾಲೆಯಿಕ್ಕಿ !
ಜಗದ ನೀತಿಯಂ ಕಂಡು ಕಾಣುತ ದಿನದಿನಂ
ಕಾಲಾಧಿಪನ ಓಜೆಯನೆ ಓಜಿಸುವವೊಲ್ ನಿಚ್ಚ
ನಡೆದಿದೆ ಅಸಂಖ್ಯಾತ ನಕ್ಷತ್ರಗಳ ಮಾಸಭೆ !

—o—

# ಮಧುರ ಕಂಪು

ಎದೆಯ ಬನದ ಬಕುಳ ಪುಷ್ಪ
ಅರಳಿ ಮಧುರ ಕಂಪು ಬೀರಿ
ಮನಃಕಲ್ಪ ಮಥಿಸಿ ಪರಮ
    ಕಾವ್ಯಧಾರೆ
ಉದಿಸಿ ಬರಲು ಭಾವ ತೀರ್ಥ
    ವಿವಿಧ ವೇಶ !

ಪೂರ್ಣಚಂದ್ರ ಕರುಣೆ ದೋರಿ
ಹೊನ್ನ ತಿರೆಗೆ ಜೊನ್ನ ಧಾರೆ
ಹರಿಸಿ ಕವಿಯ ಚಿತ್ರಕಲ್ಪ
    ಮಧುರ ಭಾವ
ರಸನೆ ತುಂಬಿ ಕಾವ್ಯಲಹರಿ
    ನಿತ್ಯ ಸಲಿಲ.

ಲೋಕ ಪ್ರಜ್ಞೆ ಮನವ ತುಂಬಿ
ಎದೆಯ ಪಕ್ಷಿ ಒಲಿದು ಹಾಡೆ
ರಾಗ ವೆನಿತು ಮಧುರ ಕಂಪು
    ಲೋಕ ಲಜ್ಜೆ
ದೂರ ತೂರಿ ಹಾಡು ನೀನು
    ಬರೆವೆ ನಾನು



ಪೂರ್ವ ಗಗನ ಭಿತ್ತಿಯಲ್ಲಿ
ಮೂಡಿ ಬಂದ ಅರುಣ ದೇವ !
ಕಿರಣ ಧಾರೆ ಚೆಲ್ಲಿ ಇಳೆಗೆ
ಸ್ವರ್ಣ ಲೇಪ
ಬಳಿದ ಜಗಕೆ ಮುಂದಿವಾರು
ಮೆಚ್ಚುವಂತೆ

ಮನವು ಮೆಚ್ಚಿ ಹರಿಯೆ ಕಾವ್ಯ
ಧಾರೆ ಭಾವ ಕೋಶ ವಿಾರಿ
ಎದೆಯ ಕಲಶ ಬಿರಿದು ಹೋಹೆ
ಕಾಲ ದೇಶ
ಶೂನ್ಯ ಮನವು ಶೂನ್ಯ ಮತಿಯು
ಶೂನ್ಯ ಕಾಣೊ !

—o—

## ನವವಿಾ ಸಂಖ್ಯೇವ ಸಜ್ಜನ ಪ್ರಕೃತಿಃ

ಅಹ, ನೆನೆದೊಡೆ ನವವಿಾ ಸಂಖ್ಯೆಯುಂ
ಮನ ಮಲ್ಲಿಗೆ ತಾಂ ದಲದಲ ಅರಳಿ
ಪೂವಪ್ಪುದು ಸಂತಸ ನೆರೆದುಂಬಿ
ಒಂಭತ್ತರ ಅಂಕೆ ಎಲ್ಲಿರ್ದೊಡಂ
ಎಂತಿರ್ದೊಡಂ ತನ್ನ ಅಸ್ತಿತ್ವಂ
ಕಳೆಕೊಳದೆ ತಾನಿರ್ಪುದು ಸುಜನರ
ಬಾಳ್ಕೆಯಲಿ ಎನೆ ಭಾವಿಸು ಮನವೇ !

—o—

# ಭಾರತ ವರ್ಷ

ಸುಸಂಸ್ಕೃತಿಯ ವೀಡು ಪರಮ ಭಾರತ ವರ್ಷ
ಪುರಾತನ ವೇದಗಳ ಸಂಸ್ಕಾರಭರಿತ
ಸತ್ಯಧರ್ಮಗಳ ಪರಿಮಳ ಮೆಲ್ಲೆಡೆಯಿಹ
ಪವಿತ್ರತಮ ರಾಷ್ಟ್ರಮೆನೆ ರೋಮಹರುಷಂ !

ಇಂದು ನಾಗರಿಕ ಸಂಸ್ಕೃತಿಯೊಳ್ ಮಿಂದು
ಪ್ರಗತಿ ಪಥದಿ ಮುಂಬರಿದ ಮಹಾ ರಾಷ್ಟ್ರ !
ಜಗದ ಶ್ರೇಷ್ಠ ರಾಷ್ಟ್ರಗಳ ಸಾಲಲಿ ನಿಂದು
ವಿಜೃಂಭಿಪ ಮಹೋನ್ನತ ಸುಂದರ ರಾಷ್ಟ್ರ !

ವೇದ ಸಂಸ್ಕೃತಿಯ ಸಾಗರದಲಿಂದು ಎಣೆ
ಇಲ್ಲದ ಬದುಕಿಗೆ ಕೂರ್ಮೊಳಿಗಳ್ ಸೇರಿ
ಕೆನ್ನೆತ್ತರೋಕುಳಿಯನೆಲ್ಲೆಡೆ ಹರಿಸುವ
ಪೊಲ್ಲಾಟದಲಿ ದುರ್ಬಲರಿಗಿಲ್ಲ ಬಾಳು !

ಕೊಲೆ-ಕೊಲೆ-ಕೊಲೆ ! ಪೆಣ್ಗೊಲೆ ! ಧರ್ಮಗೊಲೆ ! ನ್ಯಾಯ-
ನೀತಿಗೊಲೆ ! ತಾಳಲಾಗದ ದೃಷ್ಕೃತ್ಯಗಳ
ಸರಮಾಲೆ ! ರಾಕ್ಷಸೀಯತೆಯ ವೈಭವಂ !
ಭಾರತೀಯ ಕೊಲೆ ! ಕೊನೆಗಾಣದ ಕೊಲೆ ! !

ಭಾರತ ಜನನಿಯ ಕಂಬನಿ ತೊಡೆವ ಬಂಧು
ಇಲ್ಲವಯ್ಯ ಈ ಪರಿಸ್ಥಿತಿಯಲಿ ಹರಿಯೇ !
ನೀನೆಲ್ಲಿಹೆ ಬಾರಯ್ಯ ಕರುಣಾಕರನೆ!
ಕಾಲ್ವಿಡಿದು ಕೈಮುಗಿದು ಬೇಡಿಕೊಂಬೆನ್ನೆ !

—o—

ಬಕುಳ ರಾಜಿ—೭

# ಮನಮಸಣ

ನಿತ್ಯ ಚಂಚಲಿಸುತಿಹ
ಮನವೆನ್ನ ಜಡವಾಗಿ
ರುದ್ರ ಮಸಣವೆನಿಸಿದೆ !

ಹಾಳು ಚಿಂತೆಯ ಕಂತೆ
ಭಂಗಿಸಲಾಗದ ಬದ್ಧ
ವೈರಿಯ ಕಠಿಣ ಬೊಂತೆ !

ಮನದ ಮಸಣವು ಬೆಂದು
ಬಾಡೆ ಭಾವ ಹೀನತೆ
ಮಾನವತೆಯಾ ಮಿತ್ತು !

ಎನಿತೆನಿತು ಜಾನದಿಂ
ಪ್ರಯತ್ನಿಸಿದೊಡಂ ಮನ
ಮಣಿಯದೆನ್ನ ಯತ್ನಕೆ.

ಮನಮಥಿಸಿ ಕೈಗೂಡದೆ
ಸಲಸಲವು ಸೋಲುತಿರೆ
ಮನಮರ್ಕಟವೆರ್ಚಿತು !

ಮನಮಸಣಕೆ ಮೊಲ್ಲೆಯ
ಗಿಡ ನೆಟ್ಟು ಮಘಮಘಿಪ
ಪೂಬೆಳೆಯಲದೆ ಸಗ್ಗ !

ಮೊಲ್ಲೆ ಪೂ ಬೆಳೆಯದಿರೆ
ಮಸಣದ ಕಣಗಿಲೆ ತಾಂ
ಗಂಧವಿಲ್ಲದ ಪೂವು !

— o —

# ಶ್ರಮ ಸಾಧನೆಯ ಸಾರ

ರಾಷ್ಟ್ರೀಯ ರಥಚಕ್ರಮಂ ಎಳೆದು
ಮುನ್ನಡೆಸುವ ಭಂಗದಲಿ ಬಹು ಪರಿ
ಕಾರ್ಮಿಕರ್ ವ್ರತದಿಂ ಶ್ರಮದಿಂ
ದಿನನಿತ್ಯ ದುಡಿದು ಬೆವರ್ನೀರ್ಬಸಿದು
ಕರ ಭಾರವಂ ಪೊತ್ತು ಗತಿಯಿಲ್ಲ.

ಶ್ರಮ ಸಾಧನೆಯ ಸಾರ ಗಳಿಸುವ
ಹುಮ್ಮು ಬಿಸಿಲಟ್ಟಿದ ಮುಗಿಲ್ಮಂಜು
ಕರಂಗುವವೊಲ್ ಕರಗುತಿರೆ ಬದುಕು
ಗಾರಾಗಿ ಸಂಜೀವನ ಸಂಭ್ರಮ
ಉಡುಗಿ ಬಾಳ್ಬದುಕು ಬರಿದೋ ಬರಿದು !

ಸಂಜೀವನದ ಕನಸು ನನಸಪ್ಪೆ
ಅಧಿಕಾರಶಾಹಿಯ ದುರಾಚಾರ
ದುರ್ನೀತಿಯಾರಂಗಣರಿಂಗಣ
ತಾಂಡವ ನೃತ್ಯದಿಂ ಬರಿ ದಾರಿದ್ರ್ಯ
ದೇವತೆಯ ಪೂಜೆಯೋ ಕೊನೆವರಂ !

ಇರಲೊಂದು ನೆಲೆಯಿಲ್ಲದ ದೀನರ
ಭಂಗಮಂ ಚತುರ್ದಶಕಗಳಿಂದೆ
ಪ್ರಜಾಪ್ರಭುತ್ವ ನೋಡುತಿರ್ಪುದು
ಕಣ್ಣಿರ್ದು ಕುರುಡರವೊಲ್ ನಿಚ್ಚಂ
ಅರ್ಥಹೀನ ಧರ್ಮದಲಿ ನೆಲೆಸಿಲ್ಕಿ !

—o—

ಬಕುಳ ರಾಜೀ–೯

# ಭಾವನಾ ಭಾಮಿನಿ

ಚಿತ್ತರದ ಚಾಂದಳದ ಮೇರೆಯಲಿ ತೇಲಿ
ಸದ್ದಿಲ್ಲದ ಶಾಂತಿಯಲಿ ಮುದವನು ತಾಳಿ
ಕಾವ್ಯಕಾಮಿನಿಗೆ ಜೀವ ಕಳೆಯನು ತುಂಬಿ
ಭಾವನಾಭಾಮಿನಿ ಬರುವಳ್ ಮೈದುಂಬಿ.

ತಣ್ಣನೆ ತನಿಗಾಳಿಯಲಿ ತೇಲುತಲಾಡಿ
ಸಗ್ಗದರಮನೆಯ ಸ್ವರ್ಗ ದ್ವಾರದಿ ಕೂಡಿ
ನಿನ್ನ ಸೇವೆಯ ಸಲಿಸೆ ಕಬ್ಬರಸ ಸೂಸಿ.
ಭಾವನಾ ಭಾಮಿನಿ ಬರುವಳ್ ನಗೆ ಸೂಸಿ.

ಕವಿಕಾವ್ಯ ಪ್ರಜ್ಞೆಯರುಳುತಿರೆ ದಳ ಬಿರಿದು
ಕವಿ ಸಮಯವಂ ಚೋದಿಸುವೊಲ್ ತಾ ಬಂದು
ಮನದ ಜಂಜಡವ ಜಡಿಕುಟ್ಟಿ ಚಂದದಲಿ
ನಲಿದುಲಿವ ಕವಿ ಕೋಗಿಲೆಗಳ ತಾ ಹೋಲಿ !

ಕವಿ ಮಾನಸ ಮಂದಿರದಲಿ ಭಾವನೆಗಳ
ಭುಗಿಲೇಳಿಸಿ ಅವಿರಳ ದಿವಾಕನಸುಗಳ
ಕೋದು ಲೇಖನ ಕೃಷಿಯಲಿ ಜೀವನೀಯ
ಸಾರ್ಥಕ್ಯಮಂ ಕಾಂಬ ಮನಮೋಹನೀಯ
ಭಾವಭಾಮಿನಿಗೆ ವಿನಮ್ರ ನಮನ !

— o —

# ನಡೆಸು ವಿಶ್ವ ಪಥಕೆ

ಮತಿಗೆ ಬಡಿದು ಮಂಕು ಮಾಯೆ
ಜ್ಞಾನದಾಹ ಅಳಿಸಲೆಂದು
ಭಕ್ತಿಭಾವ ತುಳಿಯಲೆಂದು
ವಿಧಿಯ ಆಟ ಭವದ ಮಾಟ
ನೋಯಲಾರೆ ಬಾಳಲಾರೆ
ನೀನೆ ನಡೆಸು ವಿಶ್ವ ಪಥಕೆ !

ನಿನ್ನ ವಿಶ್ವ ರೂಪದಲ್ಲಿ
ಮನವ ನೆಟ್ಟು ವಿಶ್ವ ಪಥದ
ಜಾಡು ಪಿಡಿಯೆ ಭಕ್ತಿಯಿಂದ
ಬೇಡುತಿರುವೆ ಮರೆಯಬೇಡ
ತಾಳಲಾರೆ ಬೇಯಲಾರೆ
ನೀನೆ ನಡೆಸು ವಿಶ್ವ ಪಥಕೆ !

ನಿನ್ನ ನೆರವು ಬಯಸಿದಾನು
ಇಂದು ಸಗ್ಗ ಪಥವ ಪಿಡಿಯೆ
ನೀನು ಮುಂದೆ ನಾನು ಹಿಂದೆ
ಗಮ್ಯಸ್ಥಾನ ಜೀವ ಬಂಧ
ಕಟ್ಟಲಾರೆ ಬಿಚ್ಚಲಾರೆ
ನೀನೆ ನಡೆಸು ವಿಶ್ವ ಪಥಕೆ !

→

ಭವದ ತೆರೆಯು ಹರಿದು ನಾನು
ಮನದಿ ನೆನೆಯೆ ನಿನ್ನ ಚರಣ
ಲೋಕವೆಲ್ಲ ಮಂಕು ಮಾಯೆ
ತಿಳಿದು ನೋಡಿ ನೊಂದು ನಾನು
ಅಳಲು ಆರೆ ನಗಲು ಆರೆ
ನೀನೆ ನಡೆಸು ವಿಶ್ವ ಪಥಕೆ !

—o—

## ಶಾಂತಿ ಸಂಸ್ಕೃತಿ

ನೀಲ ಮೇಘ ಜನ್ಯರ್ ಕಣ್ಣಿನಲಿ ಕಣ್ಣಿಟ್ಟು
ಸಂಚರಿಸುತಿಹರಿಲ್ಲಿ ಸದ್ದಿಲ್ಲದೆ ನಿಚ್ಚಂ,
ಮಂಗಳ ದ್ರವ್ಯಂ ನೀಡಿ ವೇದ ಘೋಷದಿಂದಲಿ
ಸ್ವಾಗತಿಸಿ ಬರ ಮಾಡಿಕೊಳ್ಳೈ ಹೃನ್ಮಂದಿರಕೆ.

ಒಣತರ್ಕವಿತರ್ಕ ವ್ಯರ್ಥಕಾಲಹರಣವೆಂಬೆ.
ಏಗಳುಂ ರಸಾನಂದಮುಂ ಹೃತ್ ವೀಣಾ
ತಂತ್ರಿಯಲಿ ಮಿಾಂಟೆ ಓಂ ಕೃತಿಯಲಿ ಪೊಣ್ಮುತಿರೆ
ಅರ್ಥವತ್ ವ್ಯರ್ಥವಾಗದು ಶಾಂತಿ ಸಂಸ್ಕೃತಿ.

ಸತ್ಯಮೇವ ಜಯತೇ ಸತ್ಯ ಮುದ್ರೆಯನೊತ್ತು
ಮನಮನಕೆ ದೀಪದಿಂ ದೀಪವಂ ಉರಿಸುವೊಲ್
ಆತ್ಮ ಶುದ್ಧಿಯಿಂ ಜೀವನ ಶುದ್ಧಿ ವ್ರತವಂ
ಕೈಕೊಳ್ಳೈ ಬ್ರಹ್ಮಮೇವ ಮಧುರ ಸೋ ವೈಸಃ !

—o—

# ಚಿನ್ನದ ರಥ

ಓ ಎನ್ನ ಮುದ್ದು ಉಡುಪಿ ಕೃಷ್ಣನೆ !
ನಿನ್ನ ಸೇವೆಯಲ್ಲದೆ ಬೇರೊಂದು
ಕಾಯಕವರಿಯೆನ್ನೈ ಈ ಭವದಿಯೊಳ್
ಕೇಳಿನ್ನ ಮೊರೆಯ ಪರಮ ಬಂಧುವೆ !

ನಿನ್ನ ಸರಳ ಯಾತ್ರೆಗೆ ಮಾರುದ್ದ
ಹಾದಿಯಲಿ ಆಡಾಡಿ ಪಿಂತಿರುಗೆ
ಥಳಥಳಿಪ ಚಿನ್ನದ ರಥವು ಬೇಕೆ ?
ನಿಜದಿ ಪೇಳಯ್ಯ ಮಧುಸೂದನಾ !

ನಿನ್ನಯ ಬಡ ಮಕ್ಕಳ್ ಅರೆ ಹೊಟ್ಟೆ
ಅರೆ ಬಟ್ಟೆ ಬದುಕಿನೊಳ್ ಬೀದಿಯಲಿ
ಜೀವಿಸಿರೆ ವರವಿದ್ಯೆ ಬುದ್ಧಿಗಳ
ಗಂಧಮಿನಿತಿಲ್ಲದುದ ನೀನರಿಯೆಯಾ ?

ಈ ಜೀವನ ಬದ್ಧ ಬಡತನದಲಿ
ಮುಂದೆ ಗುರುವಿಲ್ಲ ಹಿಂದೆ ಶಾಲೆಯು
ಇಲ್ಲವೆನೆ ಒಡಲ ಸಂಕಷ್ಟಮಂ
ಪೇಳಿ ಪೂರೈಸಲಾರೆ ದೇವಾ !

ನಿನ್ನೊಂದು ಚಿನ್ನದ ರಥದಲಿಮ್ಮ
ಬಡ ಹತ್ತು ಶಾಲೆಗಳ ಪುಟ್ಟವಳಿ
ಸಾಧ್ಯಮಿರೆ ಆಡಂಬರದ ಯಾತ್ರೆ
ನಿನಗೇಕೆಲೆ ಹೇ ಉಡುಪಿ ಕೃಷ್ಣನೆ !

—o—

ಬಕುಳ ರಾಜಿ–೧೩

# ಭಾದ್ರಪದ ಚಂದ್ರ ಚಂದ್ರಿಕೆ

ಹುಣ್ಣಿಮೆಯು ಚಂದಿರ ಇಣಿಕಿ ಬರಲ್
ಪೂರ್ವ ಬಿತ್ತಿಯಲಿ, ಸುರ ಸೌಂದರ್ಯ
ಸಲಿಲವಂ ಚೆಲ್ಲಿ ಸೂಸುವನನುಪಮ
ಶೈಲಿಯವತರಣ ಸುಮನೋಹರಂ.
ವರಕ್ಷೀರಪೂರವೇ ಹರಿದುದೋ ಎನೆ
ಹಾಲ್ಬೆಳಕಿನ ಮಂಜುಳ ವಾರಾಹಿ
ಸದ್ದಿಲ್ಲದೆ ಹರಿಯಿತು ಧರಾತಲದಿ.

ಲೋಕೋತ್ತರವಾದ ತನಿಯಿಂಪಿನ
ತಣ್ಪು ತನುಮನಗಳಂ ಆವರಿಸಿ
ಚೆಂಗಟ್ಟು ಬಿಗಿದು ಚುಂಬಿಸೆ ಕೈಗೆ
ನಿಲುಕದ ಸವಿಯಂ ಸವಿದು ನೋಡಾ !
ಚಂದಿರನ ಆಗಮನದಿಂ ಬಾಡಿ
ಬತ್ತಿದುವೊ ಎನೆ ನಕ್ಷತ್ರೇಕ್ಷುಗಳ್
ಮಿಂಚಳಿದು ಸೋಲುತಿವೆ ಚಣಚಣಂ.

ಭಾದ್ರಪದ ಚಂದ್ರ ಚಂದ್ರಿಕೆಯಲ್ಲಿ
ಜಗವೆಲ್ಲ ಮುಳುಗಿರೆ ಸುಖಾನಂದ
ಮೋದದಿಂ ಮಂದ ಪವನ ಮುದ್ದಿಸೆ
ಮೈಮನವ ನಾಚುವುದು ಸಗ್ಗ ತಾಂ !

—o—

## ಗೌರೀತನಯ

ವಂದಿಸುವೆನೊ ಚೆಂದದಿಂದ
ಸುಂದರಾಂಗ ಶ್ರೀ ಗಣಪನೆ !
ಹಿಂದೆ ಮುಂದೆ ನೋಡದಿನಿತು
ತಂದೆ ಕೈಬಿಡದೆ ಕಾವುದೆಮ್ಮ,

ಮಂದಮತಿಯ ಭಂಗ ಕಳೆದು
ಬಂದ ವಿಘ್ನವೆಲ್ಲ ತರಿದು
ತಂದೆ ನೀನೆ ಪೊರೆಯೊ ಎನ್ನ
ನೊಂದು ಬೇಡಿಕೊಂಬೆ ನಿನ್ನ

ಅಂದದಿಂದ ವರವ ಕೊಟ್ಟು
ನಂದದಿಂದ ಹರುಷ ವಿತ್ತು
ಬಂಧವೆಲ್ಲ ತುಂಡುಗಡಿದು
ಬಂದು ಕಾಯೊ ಗೌರೀ ತನಯ

—o—

## ಅತಿ ಶೃಂಗಾರ

ಈ ಜಡ ಶರೀರವಂ ಶೃಂಗರಿಸೆ
ಚಿನ್ನದೊಡವೆಗಳ ಹೇರಿ ಮೆರೆದೊಡೆ
ಜ್ಞಾನಜ್ಯೋತಿ ಉರಿವುದೆ ಉಜ್ವಲಿಸಿ ?
ದೇಹ ಶೃಂಗಾರ ಹೆಣಶೃಂಗಾರ
ಎರಡುವೊಂದೆನಲ್ ಭಾವಿಸಿ ನೋಡ !

—o—

# ಕವಿ ಕೋಗಿಲೆ

ರೇರೇ ಕೋಕಿಲ ಮಾಭಜ ಮೌನಂ
ಕಿಂಚಿದುರಂಚಯ ಪಂಚಮ ರಾಗಂ ।
ನೋಚೇತ್ವಾಮಿಹ ಕುಹುಕೋ
ಜಾನೀತ ಕಾಕದಂಬ ಕಂಪಿತೇ ಚೂತೇ ॥

ಹೃತ್ ಬನದಿ ಹಾಡುತಿರೆ ಕವಿ ಕೋಗಿಲೆ ರಾಗ
ಮಾಧುರ್ಯವ ಹರಿಸಿ ಸರಾಗದಿಂದೆ,
ಆನರಿಯಲಿಲ್ಲ ಕವಿ ಕೋಗಿಲೆಯ ಮೌಲ್ಯಮಂ.
ಹೃತ್ ಬನದ ಕತ್ತುರಿಯು ಪಸರಿಸಿದ
ಪರಿಮಳವ ಆ ಘ್ರಾಣಿಸಲಿಲ್ಲಂ ಮನವೆನ್ನ
ಜಡ ಭರತ ಜೀವನವ ನಿನಗೊಪ್ಪಿಸಿ
ನಿರ್ಲಜ್ಜೆಯಿಂ ಬಾಳುತಿಹೆ ಅರಿತರಿತು ನಿನ್ನ
ಧರ್ಮ ಪರಿಮಳಂ ಹೊಲಸುಗೊಳಿಪವೊಲ್
ಹೇ, ದೇವದೇವನೇ ! ನೀನಲ್ಲದಾರಯ್ಯ
ಈ ಜಡಮತಿಯನರೆದು ಪುಟವಿಡುವರ್

—o—

ಭಾರತದ ಆಶ್ರಯವು ಮನುಕುಲದ ಮಂಗಲವು
ಭಾರತದ ಯಶೋಬಲವು ಜೀವನ ಬಲವು
ನಮ್ಮಯ ಸತ್ಕೃತಿಯು ಭಾರತೀಯ ಸಂಸ್ಕೃತಿಯು
ಭಾರತೀಯತ್ವವೆಮ ಸತ್ ಸಮುಚ್ಛ್ರಯವು !

ಭಾರತದ ಸವಿಗಾಳಿಯು ಎನ್ನಯ ಎದೆಯುಸಿರು
ಭಾರತದ ಘನಕಾನನವೆನ್ನಯ ತನುವು
ಭಾರತೀಯ ಧರ್ಮ ಚರಿತವೆನ್ನ ನಿಜಗತಿಯು
ಭಾರತೀಯರುನ್ನತಿಯು ಎನ್ನ ಜಯತಿಯು !

ಭಾರತದ ನುಡಿಸಕ್ಕರೆಯು ಜಾನದಕ್ಕರೆಯು
ಭಾರತದ ಜಲಧಾರೆ ಮಮ ಪ್ರಾಣಧನವು
ಭಾರತೀಯ ಧೇನುವು ಮಮ ವರ ಧನಕೋಟಿಯು
ಭಾರತೀಯ ಮನುಕುಲವು ಜಗಮತಿಗಳವು !

ಭಾರತದ ಶಕ್ತಿ ಸಂಚಯನ ನಮಗಭಿಮಾನ
ಭಾರತದ ಜಯಸಾಧನೆ ಮಮ ಜಯ ಶೀಲನೆ
ಭಾರತೀಯ ಸೋದರಿಕೆ ಜಗಕೆ ಸಮತೆಯರಿಕೆ
ಭಾರತೀಯ ಜೀವನ ನಿಜಕು ಸಂಜೀವನ !

— o —

# ಹಂಸ ಕ್ಷೀರ ನ್ಯಾಯ

ಲೋಕದೊಳ್ ಸೌಂದರ್ಯನಿಧಿಯೈಸಿ
ರಸಪೂರ್ಣ ದೃಷ್ಟಿಯಂ
ಅಯಸ್ಕಾಂತದವೊಲ್ ಆಕರ್ಷಿಸುವ
ಸುಸುಂದರ ಹಂಸ ಪಕ್ಷಿಗಳ್
ಭಾರತೀಯವಲ್ಲ ಕಾಣಿರೋ !
ವಿದೇಶೀ ಪ್ರಾಂತ್ಯದಲಿ ಸಂಜನಿಸಿ
ತಾತ್ಕಾಲಿಕ ಭಾರತೀಯತೆಯುಂಬಡೆವ
ಸಂಮೋಹನ ಪಕ್ಷಿವರ್ಗೀಯ ಹಂಸಗಳ್
ಭಾರತೀಯರ ಪ್ರೀತಿ ಪಾತ್ರಿಗಳ್.
ಮೇಣ್ ಬಂಧು-ಜೀವ-ವಲಯದ
ಅನೋಘ ಜೀವಿಗಳ್.
ಯಾವತ್ಕಾಲಂ ಹೃನ್ಮನ ತಣಿಸುವ
ಧವಳ ಕಾಂತಿಯ
ಮೇಣ್ ಕಂದು ವರ್ಣೀಯ
ನುಣ್ಮೈಯಿನ ಮುದ್ದು ಮುದ್ದು ಹಂಸಗಳ್
ಸೌಂದರ್ಯವನ್ನೆ ಸುರಸುಂದರಗೊಳಿಪ
ಸೌಂದರ್ಯದ ವಾರಾಶಿ !
ಪುಷ್ಕರಣಿಯಲಿ ರಾಜಗಾಂಭೀರ್ಯದಿಂ
ಒಯ್ಯೊಯ್ಯನೆ ತೇಲುತಿರೆ ದಂಪತಿ ಹಂಸಗಳ್
ಜೋಡಿ ಜೋಡಿಯಾಗಿ
ನೋಡಿದನಿತೂ ಸಾಲದೈ ನಯನದ್ವಯುಗಳ
ಆನಂದ ಪೂರ್ಣ ದೃಷ್ಟಿಗೆ.
ಹೆಣ್ಣು ಹಂಸೆಯಲಿ ಧವಳಿಮಾ ಕೀರುತಿಯೋ
ರಾಜ ಕುವರಿಯ ಶೀವಿಯೋ ನೋಡ !

# ಪರಮಾತ್ಮ ಹರೆ !

ಪರಮಾತ್ಮ ಹರೇ ಜಯ ಪರಮಾತ್ಮ ಹರೇ !
ಜಯವಿಠಲ ಹರೇ ಜಯ ರಘುರಾಮ ಹರೇ !
ಕಡು ಕೆಟ್ಟೆನ್ನೈ ಈ ನಶ್ವರ ಜೀವನವಂ ನೆರೆ ನಂಬಿ
ನಿನ್ನಿರುವ ಮರೆತು ಮೆರೆದೆ ಒಳಗಣ್ ಮುಚ್ಚಿ !

ಮಾನವ ಜನುಮವೆತ್ತಿ ಮಾನವೀಯತೆಯ
ಮರೆತು ಜೀವನ ಮೌಲ್ಯಮಂ ಅರಿಯದಾದೆ.
ಈ ಜೀವನ ಕೊಟ್ಟವ ನೀನೇ ಮತಿ ಗೆಡಿಸಿ
ಪಾಳ್ಗೆಡಿಸಿದವ ನೀನೇ ! ಏಂಗೈಯಲಿ ದೇವ !

ಭಂಗ ಬನ್ನವಿತ್ತವ ನೀನೇ ಗುರಿಯ ನೆಲೆ
ತಪ್ಪಿಸಿದವ ನೀನೇ ಎನಲೆನ್ನಲಿಹುದೇ
ಘೋರ ಅಪರಾಧಗಳ ಧೂರ್ತತನ ಪೇಳ್,
ನಿನ್ನ ದಾಸಿಯ ನೀನೇ ಉದ್ಧರಿಸು ಸ್ವಾಮಿ !

— o —

ನೈತಿಕತೆ ಕಳೆದಾಗಲೆ ಧಾರ್ಮಿಕ
ನೆಲೆಗಟ್ಟು ಕಳಚಿ ಬೀಳ್ವುದು ದಿಟಂ.
ಅಸತ್ಯ–ಅಮಾನವೀಯತೆ ನಿತ್ಯ
ಮುಡಿಗೇರ್ವುದು ಮುಳ್ಳಿನ ಮೊನೆಯೊಲ್

— o —

# ಅಣ್ಣ ಬಸವಣ್ಣ

ಆವಾವ ಜನುಮಗಳ ಪುಣ್ಯವೋ
ಮನುಕುಲದಲಿ ಮೈದಾಳ್ದು ಜೀವನ
ಧರ್ಮವನು ಮೈಗೂಡಿಸದಿಹ ಕಡು
ಮೂರ್ಖಮತಿಗತಿಯ ನೇರ್ಪಡಿಸಿ ಜನ
ಜೀವನಂ ಉದ್ಧರಿಸೆ, ಸದ್ಗುರುವೆ
ತಾನಾದರಾ ಅಣ್ಣ ಬಸವಣ್ಣ !

ಅಂದು ಜನರಾಶಿಗೊರೆದಿರ್ದ
ಸುಜ್ಞಾನ ತತ್ವಸಾರದಲಿ ಪಡಿ
ಮೂಡಿ ಅರಳಿದ ದಿವ್ಯ ಸುಮಂಗಳ
ಜ್ಯೋತಿಯ ಕಿರಣಗಳಿನ್ನೆಬರಂ
ಜ್ವಲಿಸುತಲಿ ಶಿವತತ್ವವಾಗಲ್
ತಾನಾದರಾ ಅಣ್ಣ ಬಸವಣ್ಣ !

ನಿರಕ್ಷರೀ ಜನಕೋಟಿ ನಡೆಗೆಟ್ಟು
ಮತಿಮೌಢ್ಯದಿಂ ಜಾತಿಮತಗಳ
ಇಕ್ಕಳದಲಿ ಸಿಲ್ಕಿ ನರಳುತಲಿರೆ
ಮೇಲು ಕೀಳೆನದೆ ಸಮಭಾವದಿಂ
ಜ್ಞಾನ ದ್ರವ್ಯವನಿತ್ತು ಉಪಕರಿಸೆ
ತಾನಾದರಾ ಅಣ್ಣ ಬಸವಣ್ಣ !

ಅಂತರಂಗದಲಿ ತಪಸ್ಸು ಘನಿಸಿರೆ
ಮಹತ್ಕಾರ್ಯ ಕಾರಣ ಕಲ್ಪಮಂ
ಅಂಗೈ ದರ್ಪಣದವೊಲ್ ಸುಲಭದಲಿ
ಅಮೃತರಸವನಿತ್ತು ಮನತಣಿಸಿ
ಲೋಕದೊಳ್ ಪವಿತ್ರಾತ್ಮವೆನಿಸಲ್
ತಾನಾದರಾ ಅಣ್ಣ ಬಸವಣ್ಣ !

— o —

# ಪುಷ್ಪ ಹೇರಾಶಿ !

ಓವೋ ನೋಡಾ ವಸಂತ ಪ್ರಭುವಿನ
ರಂಗುರಂಗಿನ ಮಹಾ ಒಡ್ಡೋಲಗಂ !
ಗಿಡು ತರು ಬಳ್ಳಿಗಳ
ಪಲ್ಲವ ಪಾಣಿಗಳಲಿ ಸುರಸುಂದರ
ವೈಭವೋಪೇತ ಪುಷ್ಪ ಸಿಂಗರಂ !
ಎಲ್ಲೆಲ್ಲಿಯುಂ ಪೂಮಿಡಿ ಮೊಗ್ಗುಗಳ್
ಮೈತುಂಬಿ ದಳದಳ ಅರಳಿ
ಪರಮ ಸೌಗಂಧವಂ ಪ್ರಸರಿಸುತಿರೆ ತಾವಾಗಿ
ಏಂ ಸೊಗವೊ ಜಗತ್ ಪ್ರಾಣಾಳಿಕೆಗೆ ತಾಗಿ.
ವಿವಿಧ ರೂಪಿನ, ವಿವಿಧ ವರ್ಣದ
ವಿವಿಧ ವರ್ಗದ ವಿವಿಧ ಪುಷ್ಪ ಹೇರಾಶಿ !
ಆವಾವ ಪರಮ ವಸ್ತುವಿನಿಂ
ನಿನ್ನವತರಣವೋ ಪೇಳ್ ಪುಷ್ಪವೇಶಿ !
ಎನಿತೆನಿತು ಯೋಚಿಸಿದೊಡಂ
ಇನ್ನೆನಿತು ಭಾವಿಸಿದೊಡಂ ಅರಿಯೆನೈ
ನಿನ್ನ ಜನ್ಮ ಮೂಲವಂ
ನಿತ್ಯ ಶಾಂತಿ–ಕಾಂತಿ, ಸತ್ಯ–ಧರ್ಮ,
ವಿಶ್ವ ವ್ಯಾಪಿ ಧರ್ಮ ಸ್ವರೂಪಿಣಿ.
ನೀ ಅರಳಿ ಬೆಳಗುವೆ
ಕಾಲದೇಶಗಳ ಎಲ್ಲೆ ಮೀರಿ.
ಬ್ರಹ್ಮ ಸೃಷ್ಟಿಯ ಸುರಮ್ಯರೂಪೆ
ಸೌಂದರ್ಯ ಸೃಷ್ಟಿಗೆ ನೀನೇ ಆಧಾರ.



ನೀನೇ ಶೀತಲ ಶಾಂತಿಗೆ ಸರ್ವಾಧಾರ
ವಸಂತ ಪ್ರಭುವಿನ ಕೀರ್ತಿಯು
ಕಿರೀಟವೇ ಸುರಸುಂದರ ಪುಷ್ಪಾಳಿ
ಕವಿಗಳ ಶೃಂಗ ಸಭೆಯ ಅಲಂಕಾರಿ
ಪ್ರಿಯ ಪುಷ್ಪ ಮೋಹಿನೀ ನಿನಗೆ ನಮನಂ !

—೦—

ತಾಂ ನಿತ್ಯನಿರಂತರ ನಗುತಲಿರೆ
ಬೇಸರ ಬಡತನ ಸಂಕಟ ಕ್ಲೇಶ
ಮುಂತಪ್ಪ ರಣಗೋಳು ಜೀವನದ
ಪ್ರಾಕಾರದಿಂ ಮೈಲಿಮೈಲಿಗಳ
ದೂರವಿಪ್ಪುವೆನೆ ತಿಳಿದು ನೋಡೆಲೋ !

—೦—

# ನಾಗನ ನೆರಳೇ ಗತಿ

ನಾಗನ ಹೆಡೆ ನೆರಳಲಿ ಆಶ್ರಯಿತ
ಮಂಡೂಕದೊಲೆಮ್ಮಯ ಬದುಕಿನ
ಪರಿಪಾಡು ! ಅತ್ತಮಿತ್ತಲೆಲ್ಲಂ
ಮಿಸುಕಲುಂಟೆ ಪಾಂಬಿನ ಕಾವಲಲಿ !

ಜೀವನೀಯ ಸಾಗರದಲಿ ಧೂರ್ತ
ಅಲೆಗಳನೊಡಂ ಹೋರಿ ತಿಣುತಿಣಕಿ
ತೀರದಾಸೆಯಲಿ ನರಳುವ ಮುಗ್ಧ
ಮನೋಗತಿಗೆ ನಾಗನ ಕಾವಲೇಂ ?

ಶಾಸ್ತ್ರ ವೇದಾಂತ ಪರಿಮಳವರಿತು
ಸಂಜೀವನ ಸಂಕ್ರಾಂತಿಯಂ ನೆರೆ
ಮೊಗೆದುಂಡೊಡಂ ಸುದತಿ ತಾನೊಂದು
ಭೋಗವಸ್ತು ಪಾಂಬಿನ ನೆಲೆಯಲಿ.

ಶಾಸ್ತ್ರಗಳ್ ಯತ್ರ ನಾರ್ಯಸ್ತು ಪೂ-
ಜ್ಯಂತೆ ರಮನ್ತೆ ತತ್ರ ದೇವತಾ :!
ಎಂದೊಡಂ ನೀತಿ ನಿಯಮಂಗಳಂ
ಪಾಲಿಪುದೆ ಕಡು ಸ್ವಾರ್ಥ ನಾಗರಂ ?

ತಂತಮ್ಮಯ ಜೀವನ ಗತಿಯಣಂ
ಕಂಡುಂಡು ಲೋಕ ಪ್ರಜ್ಞೆಯರಿವ
ಸಾಹಸಂ ಗೈಯದ ಸತಿಯ ದಿವ್ಯ
ಆಲಸ್ಯಕೆ ನಾಗನ ರಕ್ಷೆ ನಿಜಗತಿ !

—o—

# ಆರು ಕರೆದರೆನ್ನ

ಆರು ಕರೆದರೆನ್ನ ನಡುರಾತ್ರಿಯಲಿ ?
ಆಲಿಸಿದೆ ಮನವಿಟ್ಟು ಸದ್ದಿಲ್ಲದೆ
ಚಣಚಣಗಳುರುಳೆ ಮತ್ತೆ ಕೇಳಿಸಿತದೆ
ಧ್ವನಿ ಮತ್ತೆ. ಅಚ್ಚರಿಯೊಳ್ ಮನ ಮಿಡುಕಿ
ಎದ್ದು ಪೊರಗೈತರೆ ಬಾಗಿಲ ಬಳಿಯಲಿ
ಆರಿಲ್ಲ. ಕಣ್ ಮಿಟುಕಿಸದೆ ನೋಡಿದೆ
ಸುತ್ತಮುತ್ತಲ್. ಕಾಣಿಸಲಿಲ್ಲಾರು.

ಮನದೆ ನೊಂದು ನೋಯುತಿರಲಾನು
ಉಸಿರು ಗಟ್ಟಿ. ಬಲು ದಿನದ ನಿರೀಕ್ಷೆಯು
ಫಲಿಸಿತೆಂದೆಂದು ! ಬಂದೆ ಬಹನೆನ್ನ
ಹೃದಯೇಶ್ವರನೆಂದು ಪರಿಭಾವಿಸಿ
ಧುಮುಧುಮಿಸಿತು ಹಿರಿಯಾಸೆ ಬಲಿಯುತಿರೆ
ಮನೋದಧಿಯಲಿ. ಜಗ ಮರೆತೆನ್ನೈ ನಿನ್ನ
ಕಣ್ತುಂಬ ಕಾಂಬಾಸೆಯೊಳ್ ದೇವ !

ಇಂದೆನ್ನ ಮನದನ್ನ ಬಂದೆ ಬರುವ
ನೆನ್ನುತಲಿ ತಲೆವಾಗಿಲ ಪಿಡಿದಾನು
ಕದಲದಿರೆ ಆನಂದ ಲಹರಿಯುಕ್ಕಿ
ತಟತಟನೆ ತೊಟ್ಟಿಕ್ಕಿತು ಎದೆಗವಿಗೆ
ನಿಂದೆನಲ್ಲಿಯೆ ಹಣೆಗೈಯಾಗಿ. ಅರೆ
ತಾಸು ಸಂದೊಡಂ ಆರ ಸುಳಿವಿಲ್ಲ
ನೀ ಬರುವ ದಾರಿಯಲಿ ಪರಮಾತ್ಮನೆ !

→

ವಿರಾಂಗಳಂ ಚಮತ್ಕೃತಿಯಿಂ ಹಿಡಿದು ನುಂಗಿ
ಕ್ರೇಂಕರಿಸುತಿರೆ ಅಪರಿಮಿತಾನಂದದ ಮೊಳಗು !

ಲೋಕದೊಳ್ ಪ್ರಚಲಿತವಪ್ಪ
'ಹಂಸ ಕ್ಷೀರ ನ್ಯಾಯ' ಎಂಬ ನಾಣ್ಣುಡಿ
ಬರೀ ಮುಮ್ಮಾತಿನ ನುಡಿಗಟ್ಟು ಕಾಣಿರೊ !
ಹಂಸಗಳ್ ಹಾಲು ಕುಡಿಯಲೊಲ್ಲವು.
ಹಾಲು-ನೀರುಗಳನು ಬೇರ್ಪಡಿಸುವ
ಚೆಂಕೃತಿಯಂತೂ ಇಲ್ಲವೇ ಇಲ್ಲ ಕಾಣಿರೋ
ಅನುಮಾನಿಸಿದೊಡೆ ಸ್ವತಃ
ಪರೀಕ್ಷಿಸಿ ತಿಳಿಯಿರೋ ಬಂಧುಗಳೇ !

—o—

## ಶ್ರೀ ಗುರುವೆ !

ನಿನ್ನವತರಣದಿಂದೆ ಹರಿಯಿತ್ತೈ ಮನಃ ಭ್ರಾಂತಿ ;
ನಿನ್ನ ವಚನಾಮೃತ ಹರಿಸಿದೆ ಸಹನೆ ಶಾಂತಿ ;
ನಿನ್ನಿಂದೇ ಜೀವನೀ ಸುಜ್ಞಾನವಾರ್ಧಿ ಜಳ
ಜಳಿಸಿ ಹರಿವಳೀ ಧರೆಯಲಿ ಸರಿದ್ವರೆಯಾಗಿ !
ಶ್ರೀ ಗುರು ಚಿದಾನಂದನೇ ನಿನಗೆ ನಮೋ ನಮೋ !

—o—

## ಜನುಮದಾತೆ

ಹೇ, ತಾಯೆ ! ದಿನದಿನಂ
ಭವಧಿಯಲಿ ನೊಂದು ನೀ
ಕೊರಕೊರಗಿ ಕರಗಿದೊಡೆ
ಆರೆಮಗೆ ಗತಿ ಪೇಳ್ ?

ನೀನೆನ್ನ ಜಗಕಿತ್ತು
ಚೆಂಬೆಳಕ ನೆರೆದೋರ್ದು
ಉಪಕರಿಸಿ ದಿವ್ಯತರ
ರಸಾನುಭವ ನೀಡಿಹೆ

ನೀನಹುದು ನಿಜಜನನಿ
ಲೋಕಮಾತೆ ಪವಿತ್ರ
ಪುಣ್ಯಾವನೀ ದೇವಿ
ಬೇಡುತಿಹೆ ಕೈಮುಗಿದು.

ನಿನ್ನಂ ಅನುದಿನವೂ
ಪೂಜಿಸುವೆನಾದೊಡಂ
ಮುಗಿಯದೈತವರಿಣಂ
ಹೇ, ಎನ್ನ ಪ್ರಿಯ ಜನನಿ !

→

ಬಯಲಲಿಹ ಮರಗಿಡಂ
ಈವುದೆಮಗೆ ಫಲಗಳ್
ಆದೊಡಂ ಸಮನಲ್ಲ
ಪೆತ್ತ ತಾಯ ಬಲ್ಮೆಗೆ.

ಅಂಗಳದ ಮೊಲ್ಲೆಗಿಡ
ಈವುದು ನಲ್‌ಪೂವಂ
ಆದೊಡಂ ಮಿಗೆಯಲ್ಲ
ಪೆತ್ತ ತಾಯ ಕರುಣೆಗೆ.

ಮನವಿದ್ದು ಮತಿಯಿದ್ದು
ಪರಮ ಜನುಮದಾತೆಯ
ಕಡೆಗಣಿಸಿ ಗಳಿಸುವರೆ
ಪುಣ್ಯ ಪುರುಷಾರ್ಥವಂ ?

ತಾಯರಿಣವ ಸಲಿಸದೆ
ಎಲ್ಲಿಯು ಪರಮ ಸಾಧನೆ ?
ಜಗಬೆಳಕಿಗೆ ತಂದಿಹ
ತಾಯಿ ಜಗನ್ಮಾತೆ ಕಣ ?

— o —

# ರಸಸ್ಫೂರ್ತಿ

ರಸಸ್ಫೂರ್ತಿಯ ವಾಕ್ಯ ಕಾವ್ಯಮಪ್ಪಂತೆ
ರಸಕಾವ್ಯಧಾರೆಯುಂ ಮನಮನಕೆ ಸ್ಫೂರ್ತಿ
ತಾನಾದಪುದು ರಸಾನುಭೂತಿಯು ಘನಿಸಿ !

ರಸಾತ್ಮಕ ಕಾವ್ಯದಿಂ ಆನಂದ ರಸನೆ
ಉಕ್ಕಿ ಭಾವೋಜ್ವಲತೆಯು ರಸಗ್ರಹಣಂ
ತಾನಾದಪುದು ಕಮನೀಯಾನುಭವ ಶುಕ್ತಿ.

ವರರಸಾಸ್ವಾದದಿಂ ದಿವ್ಯ ರಸಋಷಿಯು
ಜ್ಞಾನ ಸಂಗೋಪನೆಯು ಅನನ್ಯ ಅನುಭವ
ತಾನಾದಪುದು ಕಾವ್ಯ ಸಂಪದಕೆ ಬಿತ್ತು.

ನೆರೆ ಭಾವವಿಭಾವಗಳ ಚಿಂತನ ದ್ರವ್ಯ
ರಸಭಾವದುದ್ದೀಪನ ಸಂಯೋಗಕ್ಕೆ
ತಾನಾದಪುದು ರಸಾಭಿವ್ಯಕ್ತಿ ಸಂಪುಟಂ !

— o —

ಸ್ತ್ರೀ ಅಹಿಂಸೆಯು ಪ್ರತಿ ಅವತಾರ !
ನೊಂದು ನೋಯುತ ಪ್ರೀತಿ ಅರ್ಥಾತ್
ಶಾಂತಿಯಂ ಮೂಡಿಸುವ ಶಕ್ತಿಶ್ರೀ !

— o —

# ಶಿರೋಮಣಿ

ಪೂರ್ವೀ ದಿಗ್ ದೇಶದಲಿ ಮೂಡಿಬರೆ ದಿನಕರ
ಪ್ರಾತಃಸಮಯಮಂ ವಿಜೃಂಭಿಸುತ .
ಉಜ್ವಲೋಜ್ವಲ ಕಿರಣಧಾರೆಯಂ ತಾಸೂಸಿ.
ಬೆಳ್ಮುಗಿಲ್ ಮಂಜುವಾಹಿನಿಯಂಚು
ಕನಕರಂಗಿನಿಂದೊಪ್ಪಿ ಮನೋಹರ ರಾಗದಿಂ
ಕಣ್ಗೆಡ್ಡಮಾದುದು ಸುರಸುಂದರ ರೂಪಿನಿಂ.

ಭ್ರಮಂತ ಭ್ರಮರಗಳ ಸಿರಿದಂಡು ಝೇಯೆಂದು
ಝೇಂಕರಿಸಿ ಪೂವಿಂ ಪೂವಿಂಗೆ
ಪಾರ್ದು ಮಧುವಂ ಪೀರ್ದು ಮನದುಂಬಿ ತೋಷದಿಂ
ನಲಿದಾಡುತಲಿ ಪಾಡಿ ಪಾರಾಡಿ
ಝೇಂಕಾರವನೋಂಕರಿಸುತಿವೆ ಜಗಧಾತ್ರಿಯಂ
ಮರೆತವೋಲ್ ರವಿದರ್ಶನದಿಂ ಮನ ಮತ್ತೇರಿ !

ಅಸಂಖ್ಯ ರಾಗಾನುರಾಗಗಳ ವಿಶ್ವಜಿತ್
ವರ್ಣಶಿಲ್ಪಿ ತಾನಾಗಿ, ಜೀವನ
ಸಂಭ್ರಮಕೆ ಐಂದ್ರಜಾಲಿಕ ಮಹತ್ ಸೌಂದರ್ಯ
ರಾಶಿಯಂ ಪರಿಪೂರ್ಣ್ಯಧಾರೆಯೊಲ್
ಸೂಸಿ, ಜಗದಗಲ ಜಡಕೆ ಚೇತನವೆರಸುವೊಲ್
ರಾರಾಜಿಸಿದಂ ಅರುಣವಿಕಿರಣ ಶಿರೋಮಣಿ !

— o —

# ರಣಹದ್ದು

ತೇಽಮೀ ಮಾನವ ರಾಕ್ಷಸಾಃ
ಪರಹಿತಂ ಸ್ವಾರ್ಥಾಯ ನಿಘ್ನಂತಿಯೇ !

ಎಲ್ಲಿ ಹಣುಕಲಲ್ಲಿ ರಣಹದ್ದಿನ
ಕೆಂಗಣ್ಣ ಕುಡಿನೋಟ ತೆಕ್ಕನೆಯು
ಕರ್ಬುನದ ಸರಳಿನೋಲ್ ಇರಿವುದೈ
ನಂಜುಗುವ ಬಾಳಿನಲಿ ವರಸತಿಗೆ.

ಪೊರಗುಯ್ವೆನೆನಲಲ್ಲಿ ರಣಹದ್ದು !
ಹೆಜ್ಜೆ ಮುಂದಿಡಲಲ್ಲಿ ರಣಹದ್ದು !
ಹೆಜ್ಜೆ ಹಿಂದಿಡಲಲ್ಲಿ ರಣಹದ್ದು !
ಏಂ ಗೈವೆನೆನಲಲ್ಲಿ ರಣಹದ್ದು !

ಜೀವನ ಕರ್ಮಕಲೆ, ಕರ ಕುಶಲ
ಕಲೆ, ಮನಃಕಲ್ಪದಲಿ ಘುಮುಘುಮಿಪ
ಕಾವ್ಯಕಲೆ, ಆಶು ಕವಿತೆಗಳ ರಸ
ಸ್ಫೂರ್ತಿಗೆ ರಣಹದ್ದಿನ ಕೂರ್ಗಣ್ಣು !

ಜೀವನೀಯ ರಣ ವೇದಿಯ ಮೇಲೆ
ರಣಹದ್ದು ಕಗ್ಗಾವಲು ಕಾದಿರೆ
ಕಗ್ಗೋಡೆಯ ಸೆರೆಯುಲಿ ಕಲೆಗೆಲ್ಲಿ
ನಿಜ ನೆಲೆ–ಬೆಲೆ ಪೇಳ್ ಪ್ರಭುವೇ !

—o—

ಸಂದುದು ಸಮಯಂ ಮೂಡಣದಿಶೆಯಲಿ
ಮೂಡುತಿರೆ ಮುಂಬೆಳಕು ಲೋಕಕೆ ತಿಳಿ
ಬೆಳಕು ಚೆಲ್ಲೆ ಎಲ್ಲಂ ಬಟ್ಟ ಬಯಲು !
ಓ, ದೊರೆಯೆ ! ಅಂದಿಂದಿಗು ನಿನಗಾಗಿ
ಕಾದು ಕಾದು ಬೇಸತ್ತುವು ಕಣ್ಣಾಲಿ !
ಬಂದಾನೊ ಬಾರನೊ ಅರಿಯಲಾಗದೆ
ಬಳಬಳನೆ ಹರಿಯುತಿದೆ ಅಶ್ರುವಾರಿ !

—o—

ಮನುಜ ನಾಚುಬುರುಕ ಪ್ರಾಣಿಯಿದರ್ು
ಕೃತಘ್ನ ವಂಚಕ ಅತೀ ಲೋಭಿ
ಕುಡುಕ ಚಂಚಲ ಭೀರು ಮುಂತಪ್ಪ
ದುರ್ಗುಣಗಳ ಗಣಿಯೂ ತಾನಹುದು !

—o—

# ಮತಿಯ ಖಡ್ಗ ಮಸೆದು ನುಗ್ಗು !

ತಿಪ್ಪ ತಿಪ್ಪ ಹೆಜ್ಜೆ ಇಡುತ
ಮುದ್ದು ತಂದ ನೀನು ಬರಲು
ಮೊಗದಿ ಎಳೆಯ ನಗುವ ಚೆಲ್ಲಿ
ಮುದ್ದು ಮಾತು ತೊದಲಿ ನುಡಿವೆ
'ಅಮ್ಮ' ಎಂದು ಎನ್ನ ಮಗುವೆ !

ಮುಂದೆ ನೀನು ಕಲಿತು ಬಲಿಯೆ
ಜಗವ ಅರಿತು ಮನವ ಮಥಿಸಿ
ಬಾಳು ಬದುಕು ಹಸನು ಮಾಡೆ
ಕಾಳು ಕುಟ್ಟೆ ಜೊಳ್ಳು ತೂರಿ
ಮತಿಯ ಖಡ್ಗ ಮಸೆಯೆ ನೀನು.

ನಿಚ್ಚ ಕಲಿತು ಬಲಿತು ನಲಿವೆ
ನಾನು ಭವದ ಭಂಗ ನುಂಗಿ
ಜೀವ ಸೋತು ದೇಹ ಸೋತು
ತಾಳಲಾರೆ ನೋಯಲಾರೆ
ಬಾಳು ಬದುಕು ಬಹಳ ಭಾರ.

ಕಾಲ ಉರುಳಿ ಮುಪ್ಪು ಅಡರಿ
ಬಳಲು ತಿರುವೆ ಹಗಲು ಇರುಳು
ದೇವ ನಿನ್ನ ಮನದಿ ಭಜಿಸಿ
ಹಾಡಿ ಬೇಡಿ ನಿನ್ನ ಸೇವೆ
ನಲಿಸಿ ಕಾಲ ಕಳೆವೆ ಇಂದು.

ವೃದ್ಧ ಜೀವ ನರಳುತಿರಲ್
ಮುದ್ದು ಮುಖದ ಕಂದ ಬೆನ್ನು
ತಿರುವಿ ನಿಂದ, ಕಷ್ಟ ಕಂಡು
ಕಾಣ ದಾದ, ಜಗದ ಮಾಯೆ
ಮುಸುಗಿ ಕಾಮ ಲೀಲೆ ಬಲಿತು.

ಇನ್ನು ಸಾಕು ಭವದ ಬದುಕು
ದೇವ ನಿನ್ನ ಚರಣ ತಲಕೆ
ಮಣಿದು ಕಿರಿಯ ಸೇವೆ ಸಲಿಸೆ
ನಡೆಸು ಕರವ ಪಿಡಿದು ನಿನ್ನ
ನಾಡ ಗುಡಿಯ ಸೇವೆ ಮಾಡೆ

—o—

ಶೀಲ ಪಾಂಡಿತ್ಯ ಶೌರ್ಯ ವಿವೇಕ
ಯಾರ ಎರ್ದೆಯಲಿಹುದೋ ಆ ದಿವ್ಯ
ಸಂಪುಟದ ಕೀಲಿಕೈ ಸಗ್ಗಿಗರ
ಕೈಲಿರ್ಪುದು ! ಕಳ್ಳರಿಗೆ ದಕ್ಕದು.

—o—

# ಮಹಾತ್ಮಾ ಗಾಂಧೀಜಿ

ಓ ! ಅಂದು, ಸ್ವಾತಂತ್ರ್ಯ ಪೂರ್ವದೊಳ್
ಶಿವಮೊಗ್ಗೆಯಲಿ ಕಾರ್ಯಕರ್ತರಂ
ಕಂಡು ಮಾತಾಡಿ ಕಾರ್ಯಕಾರಣ
ಸಂಯೋಜನೆಯ ರೂಪಿಸಲ್ಕೈದರ್
ಮಹಾತ್ಮಾ ಗಾಂಧೀಜಿ !

ಜನಕೂಡಿ ಸಭೆನಡೆದು ಶಕ್ತಿಯಂ
ಸಂಘಟಿಸಿ ಉಪದೇಶ ಉಪನ್ಯಾಸ
ಮತ್ತೆನಿತೊ ಕಾರ್ಯಕ್ರಮ ಮುಗಿರ್ಚಿ
ಮುಂದಿನೂರ್ಗೆ ಪೊರಡಲಣಿಗೊಂಡರ್
ಮಹಾತ್ಮಾ ಗಾಂಧೀಜಿ !

ತರುಣ ಕಾರ್ಯಕರ್ತನೊರ್ವ ನುಡಿದಂ,
'ಮಹಾತ್ಮರೇ ? ನೀಮಿಲ್ಲಿಗೈದು ಜೋಗ್
ಜಲಪಾತವನೀಕ್ಷಿಸದೆ ಪೋಪುದು
ಸರಿಯೆ ? ನೀಮಿಂದುರ್ಮ ಸತ್ಯಸುಂದರ
ಜಲಪಾತವೀಕ್ಷಿಸಿರಿ !'

ಆಗಳಾ ಮಾತಿಂಗೆ "ನಾನ್ಪೈದುದು
ಜನ ಸಂಗರದ ಸುಧಾರಣೆಗಾಗಿ,
ಜಲಪಾತವ ನೀಕ್ಷಿಸಲಲ್ಲ ಕಣ !
ಇನ್ನೆನಿತೊ ಕಾರ್ಯಕ್ರಮ ಮಿರ್ಕು" ಮೆಂದರ್
ಮಹಾತ್ಮಾ ಗಾಂಧೀಜಿ !

→

ಇಂತೊಂದು ಸೌಂದರ್ಯ ರಾಶಿಯುಂ
ಅಪೂರ್ವಂ ನೀಂ ತಪ್ಪಿಸದಿರೆಂದು
ಮತ್ತೆ ನುಡಿಯಲಾ ಯುವ ಮನೀಷಿಯ
ಅಭಿಲಾಷೆಯರಿತು ಪಡಿ ನುಡಿದರ್
ಮಹಾತ್ಮಾ ಗಾಂಧೀಜಿ !

ಮಿತ್ರ ಕೇಳ್ ! ಇದಕಿಂ ಮಿಗಿಲಪ್ಪ
ಜಲಪಾತವ ನಾಂ ಕಾಣೆನೆ ಜಗದಿ ?
ಗಗನದಿಂ ಬೀಳ್ವ ಜಲಪಾತವಂ
ಏಗಳುಂ ಕಾಂಬೆವಲ್ತೆ ? ಮತ್ತೇಂ
ಇದರೊಳ್ ಪೆರ್ಚಳಂ ?

ತರುವಾಯಿ, ಯುವ ಮನೀಷಿ ತನ್ನೊಳ್
ಪರಿಭಾವಿಸಿ ಧೀಮಂತನ ಮುಂದೆ
ಕಿರು ಚಿತ್ರವಂ ತೋರ್ದು ಕಿರುಮನಂ
ಪ್ರದರ್ಶಿದೆಂ ಎಂದು ಕೊಳ್ಳುತಲಿ
ಲಜ್ಜೆಯಿಂತಲೆ ಮಣಿದಂ

—o—

ಮನುಜ ನಾಜೂಕಿನ ನಯವನರಿತ
ವೇಳೆಯೊಳ್ ಶಿಲಾ ಕಾಠಿಣ್ಯವಂ
ಮೈಗೂಡಿ ಕೊಂಬುದಂ ಮರೆಯಲಿಲ್ಲ.

—o—

# ಗೇಟ್‌ವೇ ಆರ್ಚ್

ವಿಜ್ಞಾನ ಯುಗೀಯ ಅನನ್ಯನುಪಮ
ಬೌದ್ಧಿಕಸ್ತರದೊಳ್ ಪಡಿಮೂಡಿದ
ನವನವೋನ್ವೇಶ ಶಾಲೀನತೆಯು
ದೇವ ಬಂಧುರ ತೇಜವನೇನೆಂಬೆ ?

ಲೋಕದೊಳ್ ಮನುಕುಲಜರಲಿ ಜಾಗೃತ
ಜೀವನದ ಸಾಸ ಕಾರ್ಯಗಳ ಪರಿ
ದಿನದಿನಂವೆರ್ಚುತಿರೆ ಯೋಜನಾ
ವೈಖರಿಯೆ ಸಂಯೋಜನಾ ಕೃತಿ ಕಣ !

ಮಿಸ್ಸೂರಿ ರಾಜ್ಯದಲಿ ಸೇಂಟ್‌ಲೂಯಿ
ನಗರಿಯಂಚಿನಲಿ ಭೋರ್ಗರೆಯುತ್ತೆ
ಮುನ್ನುಗ್ಗಿ ಅಪ್ಪಳಿಸುವೊಲ್ ರುದ್ರ
ಭೀಷಣಗತಿಯಲಿ ಹರಿದಿದೆ ಮಿಸಿಸಿಪಿ !

ಭೀಕರ ಜಲರಾಶಿಯೊಡಂ ಸ್ಪರ್ಧಿಪ
ಮಾಳ್ಕೆಯುೞಿ ನುಗ್ಗುತಿವೆ ಸರಿಸದಲಿ
ಅಸಂಖ್ಯಾತ ಅವರ್ಣನೀಯಮಾ
ತರತರದ ಜೀವಕೋಟಿ ವಾರಾಶಿ !

ಅಂತಪ್ಪ ಮನೋಲ್ಲಾಸಕರ ಮಾದ
ದೃಶ್ಯಕೆ ನೆರುಗೀಯುವ ಮಾಳ್ಕೆಯಲಿ
ವೈಭವೋಪೇತ ಗಗನ ಚುಂಬಿತ
ಸುರ ಸುಂದರವಾ Gateway arch !

ಸೇಂಟ್ ಲೂಯಿ–ಯಲಿಳಿವ ವಿಮಾನಗಳ್
ಅತ್ಯದ್ಭುತ ಕಮಾನಿನ ಮೂಲಕ
ಹರಿದು ರನ್‌ವೇ ಸೇರುವುವು ಎನಲ್
ಆದರ ಗಾತ್ರದ ಪರಿಯನರಿಮನವೇ !

ಅಮೆರಿಕೆಯ ರಾಷ್ಟ್ರೀಯ ಸ್ಮಾರಕ ಮೆನೆ
ಕಲಾ ನೈಪುಣ್ಯದಿಂ ಸಾಹಸದ
ಸಂಯೋಜನೆಯಿಂ ನಿರ್ಮಿತಗೊಂಡು
ಉಜ್ವಲಿಪ Gateway to the west!

ಪಶ್ಚಿಮದ ಮಹಾದ್ವಾರ ಮೆನಿಸಿರ್ಪ
ಆರ್ಚಿನೆತ್ತರ ಆರುನೂರ ಮೂವತ್ತು
ಅಡಿಗಳೆನೆ ಜಗತ್ತಿನ ರಾಷ್ಟ್ರೀಯ
ಸ್ಮಾರಕಗಳಲದುವೇ ಪ್ರಮುಖ ಕಣ !

ಮಿನ್ನೆ, ಬಲ್ ಭಂಗದಿಂ ಮಿಸಿಸಿಪಿ ಮಹಾ
ನದಿಯ ಪಶ್ಚಿಮ ಕ್ಷೇತ್ರಮಂ ವಾಸ
ಯೋಗ್ಯಗೊಳಿಸಿದ ಧನ್ಯ ಜೀವಿಗಳ
ಸ್ಮರಣಾರ್ಥಂ ವಿರಚಿತ ಕಮಾನದು

ಅಮೆರಿಕದ ಕಾಂಗ್ರೆಸ್ಸಿನ ಇಚ್ಛೆಯೊಲ್
ಲೂಫರ್ ಎಲಿಸ್ಮಿತ್‌ರ ಪರಿಶ್ರಮ
ವಿಶೇಷಂ ನಿರ್ಮಿಸಿದ ಸುಸುಂದರ
ಉದ್ಯಾನವನ ಕಮಾನಂಗಣದಲಿ !

ತುಕ್ಕು ರಹಿತ ಪರಿಶುಭ್ರ ಲೋಹದಿಂ
ನಿರ್ಮಿತ ಕಮಾನು ಸುಲಭ ಸಾಧ್ಯಮೆ ?
ದೂರದಾಣದಿಂ ತಹ ಮೇಣೆತ್ತಿ
ಬಿಗಿ ನಿಲಿಪ ಕಾರ್ಯವದು ಕಡುಕಷ್ಟಂ.

ಸಾರಿಗೆಯ ಸೌಕರ್ಯಂ ಇನಿತಿಲ್ಲದ
ಕಾಲದಲಿ ಆ ಅದ್ಭುತ ಸಾಸಂ
ಮನುಕುಲದ ಸಾಸಕನುಗುಣಮಪ್ಪಿ
ಬೌದ್ಧಿಕಸ್ತರದೊಜೆಯೆ ಶೋಭಿತಂ !

ಗೇಟ್‌ವೇ ಆರ್ಚ್ ಪಿಂಗಡೆ ಭೂಗತ
Museum of westward
Expansion ಎಂಬ ಪೆಸರಂ
ಪಡಿವೊತ್ತು ನಿರ್ಮಿತ ನಲ್ ಪತ್ತನಂ !

ವೀಥಿ ವೀಥಿಗಳ್, ಚಲನ ಚಿತ್ರಗಳ
ಮಂದಿರಗಳ್ ಮುಂತಪ್ಪ ಅದ್ಭುತ
ಅವತರಣಗಳ ಅಪೂರ್ವ ಸಂಗಮ ;
ಪೂರ್ವ ವಿಜ್ಞಾನ ಸಾಮಾನ್ಯಮಲ್ಲ.

—

ಸ್ಮಾರಕದ ಪರ್ಯವೇಕ್ಷಣ ಮಂಚಂ
ಅರವತ್ತೈದು ಅಡಿ ಉದ್ದ ಏಳಡಿ
ಅಗಲವಿರ್ದು ಮೂತ್ತೆರಡು ಕಿರು
ಬೆಳಕಿಂಡಿಗಳ ರಮ್ಯ ನಿರ್ಮಾಣಂ !

ಇನ್ನೂರಡಿ ಎತ್ತರದ ತಳಹದಿಯ
ಸುಭದ್ರ ಬುನಾದಿಯಲಿ ಶತಮಾನ
ಪರ್ಯಂತ ಬಾಳುವೊಲ್ ಗೋಡೆಗಳ್
ಸ್ಟೈಯಿನ್‌ಲೆಸ್ ಸ್ಟೀಲಿನ ಅವತರಣಂ !

Gateway Arch ಪರಮಸಾಸಿಗರ
ದಿವ್ಯ ಸ್ಮಾರಕ ! ಲೋಕದ ಕಂಗಳ್
ತೆರೆಸುವೊಲ್ ಪೊದಳ್ದಿಹ ಪ್ರಾಚೀನ
ಮಹತ್ತರ ಯೋಗಾನುಯೋಗ ಕಣಾ !

—o—

ಮಾನವೇತಿಹಾಸವು ಪ್ರಕೃತಿಯ
ಲಾಭದಲಿ ಬಾಯಿಡುವ ದುರಾಸೆಯ
ದುಷ್ಟ ಪ್ರವೃತ್ತಿಯಲಿ ಮುಳುಗಿರುವ
ವಿಚಿತ್ರ ನಡವಳಿಕೆಯ ಮಾಹಿತಿಯೆ !

—o—

# ಬಾ ತಾಯಿ! ಬಾರೆ, ದುರ್ಗೆ ಕಾಳಿಕೆ !

ಬಾರಮ್ಮ ತಾಯಿ ! ದಯೆಗೈದೆನ್ನ
ಶಿರೋದ್ದೇಶದಲಿ ನರ್ತಿಸಬಾರೆ !
ನಿನ್ನ ಪಾದ ಪಂಕೇರುಹ ಸ್ಪರ್ಶ
ಮಾತ್ರದಿಂ ಅರಳಲೆನ್ನ ಮತಿಸುಮ
ದಳದಳ ಸಹಸ್ರದಳ ಬಿರಿವವೊಲ್ !

ಬಾ, ತಾಯಿ ! ಬಾರೆ, ದುರ್ಗೆ ! ಕಾಳಿಕೆ !
ಎನ್ನ ಮನಃಕಲ್ಪದಲಿ ನೆಲೆನಿಂದು
ತತ್ತ್ರಳ ತುಳಿದು ನರ್ತಿಸುತಿರೆ ನೀ
ಚಿತ್ತರಂಗದಿ ಸ್ಫೂರ್ತಿ ಕಿಡಿವೊಡೆದು-
ಶತ ಸಹಸ್ರಮುಪ್ಪುದು ಹೇ ತಾಯೆ !

—೦—

## ಅರಿಕೆ

ಕಹಿಸಿಹಿಗಳೆರಡು ಬೆಂಬಿಡಿದು ಬಹ
ಸಹ ಜೀವನೀಯ ಭಾಗ್ಯಗಳೆನಲ್
ಭಂಗ ಬೇಡವೆನ್ನಲಾರೆ ಸಹಿಸುವ
ಧೈರ್ಯವಂ ನೀಡೆಂದು ಬೇಡುವೆನ್ !
ನೋವು ನಂದಲೆಂದು ಕೇಳಿಕೊಂಬ
ಬಯಕೆಯಿಲ್ಲಂ, ನೋವು ನಿವಾರಿಪ
ಶಕ್ತಿಯುಂ ಬೇಡುವೆನ್ ಭಕ್ತಿಯಿಂ.
ಎಲ್ಲ ರೀತಿಯ ಸೋಲಿನಲಿ ನೀನು
ಕೈಹಿಡಿದಿರುವುದೆನಗೆ ತಿಳಿದಿರಲಿ
ಓ ಎನ್ನ ಸಿರಿ ದೊರೆಯೆ !

—೦—

# ನಂದಕುಮಾರಂ ಚಿನ್ಮಯ ರೂಪಂ

ನಂದ ಕುಮಾರಂ ಚಿನ್ಮಯ ರೂಪಂ
ಅನಘಂ ಅತೀತಂ ಕರುಣಾಕರಂ

ಹಣೆಯಲಿ ಕಸ್ತೂರಿ ತಿಲಕವಿಟ್ಟು
ಕೊರಳಲಿ ಚಿನ್ನದ ಹಾರವನಿಟ್ಟು
ಕಾಲಂದುಗೆ ಗೆಜ್ಜೆ ಜಣಜಣರೆನೆ
ಧಿಮಿಧಿಮಿ ಕುಣಿಯುತ ನೀ ಬಾರಯ್ಯ

ನಂದ ಕುಮಾರಂ ಚಿನ್ಮಯ ರೂಪಂ
ಅನಘಂ ಅತೀತಂ ಕರುಣಾಕರಂ

ಪಟ್ಟೆ ಪೀತಾಂಬರವ ಮಡಿಯುಟ್ಟು
ಮತ್ತೆ ಚಿನ್ನದ ಕಿರೀಟವ ತೊಟ್ಟು
ಕೈಯ ಕೊಳಲನೂದಿ ನಾದವಗೈಯುತ
ಚಿಣ್ಣರರಸನೆ ನೀ ಓಡಿ ಬಾರಯ್ಯ

ನಂದಕುಮಾರಂ ಚಿನ್ಮಯ ರೂಪಂ
ಅನಘಂ ಅತೀತಂ ಕರುಣಾಕರಂ

—o—

# ಹಾರಿಸಿ ಏರಿಸಿ ಕನ್ನಡ ಬಾವುಟವ

ಕನ್ನಡ ದೇಶದ ಕನ್ನಡ ಕಂದರಿರಾ !
ಕನ್ನಡ ತಾಯಿಯ ಕನ್ನಡ ಮಕ್ಕಳಿರಾ !
ಒಂದಾಗಿ ದುಡಿದು ಒಂದಾಗಿ ನಡೆದು
ಹಾರಿಸಿ ಏರಿಸಿ ಕನ್ನಡ ಬಾವುಟವ.

ಜಾತಿಮತಗಳ ಕೋಟೆಯ ಒಡೆದು
ಮನಸು ಮನಸುಗಳ ಸೇರಿಸಿ ಬೆಸೆದು
ಕೊಂಕು ಬುದ್ಧಿಭಾವವ ಕಿತ್ತೊಗೆದು
ಹೊರಡಲಿ ಕನ್ನಡ ಕಂದರ ಸಿರಿದಂಡು !

ಕಣ್ಣಲಿ ಕೊನರಲಿ ಕನ್ನಡ ನಿಜಕನಸು
ಎದೆಯಲಿ ಬೆಳಗಲಿ ಕನ್ನಡ ಸಿರಿಬೆಳಸು
ಒಡಲಲಿ ಮೂಡಲಿ ಅಮೃತದ ಬಿಂದು
ಕುಗ್ಗದೆ ಜಗ್ಗದೆ ಹಿಗ್ಗಿ ನಡೆಯಿರಿ ಮುಂದೆ !

ಕನ್ನಡ ತಾಯಿಗೆ ಶುಭವನು ಬಯಸಿ
ಒಕ್ಕೊರಲ ಪಣ ತೊಡಿ ತಾಯ ಸೇವೆಗೆ.
ಕನ್ನಡ ತಾಯಿಯ ಸೇವೆಗೆ ಬನ್ನಿ.
ಹಾರಿಸಿ ಏರಿಸಿ ಕನ್ನಡ ಬಾವುಟವ.

—o—

# ಜಯತು ಜಯತು ಹೇ ಪರಮಾತ್ಮ ಹರೆ !

ಜಯತು ಜಯತು ಹೇ ಪರಮಾತ್ಮ ಹರೇ !
ಜಯತು ಜಯತು ಹೇ ಪರಮಾತ್ಮ ಹರೆ !

ನಾರದವರದ ಬ್ರಹ್ಮರುದ್ರೇಂದ್ರಾದಿ ವಂದಿತ
ದೇವದೇವೋತ್ತಮ ಸುರಜನ ಪರಿ ಸೇವಿತ
ನಿತ್ಯ ಸತ್ಯ ಸಂಕಲ್ಪ ದೀನ ದರಿದ್ರ ಪಾಲಿತ
ಹೇ ತ್ರಿಗುಣಾತೀತ ಕರುಣೆ ದೋರೈ ವಿಧಾತ !

ನಿಚ್ಚ ಐಹಿಕ ಸುಖ ಶಾಶ್ವತವೆಂದು ಭ್ರಮಿಸಿ
ಭವ ಸಾಗರದೊಳದ್ದಿ ನಿನ್ನ ಧ್ಯಾನವ ತ್ಯಜಿಸಿ
ಭುವಿಗೆ ಭಾರವೆನಿಪೊಲ್ ವ್ಯರ್ಥನಾದೆ ಜನಿಸಿ.
ಹೇ ನೀಲಮೇಘ ಶ್ಯಾಮ ಕರುಣಿಸಿ ದಯೆದೋರೈ !

ಜಯತು ಜಯತು ಹೇ ಪರಮಾತ್ಮ ಹರೆ !
ಜಯತು ಜಯತು ಹೇ ಪರಮಾತ್ಮ ಹರೆ !

—o—

ಮನುಜ ದೂರದೃಷ್ಟಿಯು ಇಲ್ಲದೆಯೆ
ಕೇವಲಾಶಾಜೀವಿಯಾಗಿರ್ದೊಡೆ
ನಿರಾಶೆಯು ಕಟ್ಟಿಟ್ಟ ಬುತ್ತಿಕಣ !

—o—

ಬಕುಳ ರಾಜಿ—೪೩

## ಶ್ರಾವಣ ಮಹಾಪ್ರಭು

ಕಣ್ಣ ದಿಟ್ಟಿಯಲಿ ಮಣ್ಣ ಕಾಂತಿಯು
ಹಚ್ಚ ಹಸುರನು ಹಾಸಿರೆ ಶಾಂತಿಯು
ಚಿನ್ನ್ಹಯೊಲ್ ನಿನ್ನ ಸೃಷ್ಟಿ ಮೂಡಿದೆ
ಚೆಂಬಿಸಿಲ ಹೊಂಗಾಂತಿಯು ಹರಡಿದೆ

ಮಳೆಯು ಜಡಿ ಸುರಿಯುತಿದೆ ಬೋರಾಗಿ
ಲೋಕದ ಮಡಿಲಿಗೆ ನೆರೆ ತೂರಾಡಿ
ಹಿಂಗಾರ್ ಚಳಿಗಾಳಿ ಸುಳಿದಾಡಿ
ಸುಯ್ಯ್ಕುತ ಬರುತಿದೆ ಮರಗಳಲಾಡಿ

ಹಸಿರು ಕ್ರಾಂತಿಗೆ ಕೋಡನು ಮೂಡಿಸಿ
ಹಸಿದ ಒಡಲಿಗೆ ತಣಿವನು ಕೂಡಿಸಿ
ಭೂ ರಮೆಗೆ ಹಚ್ಚನೆಯ ಮಡಿಯುಡಿಸಿ
ನಲಿವನದೊ ಶ್ರಾವಣ ಮಹಾಪ್ರಭು !

—o—

ಎಲ್ಲಾ ವಸ್ತುಗಳ ಅಳತೆಗೋಲು
ತಾನಾದ ಮನುಜ ತಾ ಮೈಗೂಡಿ
ಕೊಂಡ ಸರಪಳಿಯಂ ಅಳಿದು ತಿಳಿಯ–

—o—

# ಕೈಮುಗಿದು ಬೇಡುವೆನೊ ನಾನಿನ್ನ

ಕೈಮುಗಿದು ಬೇಡುವೆನೊ ನಾನಿನ್ನ
ನಂದಕಂದ ಮುಕುಂದ ಸಲಹೆನ್ನ
ನಿನ್ನ ಸಾಲವ ತೀರಿಸುವೆನೆಂದು
ನುಡಿ ಸೇವೆಯ ಗೈಯುತಿರುವೆನಿಂದು.

ಎನ್ನ ನಿಚ್ಚ ನಡೆಯು ಹುಡಿ ಕಜ್ಜಂ
ನಿನ್ನ ನಿರ್ಮಲ ಪಾದ ಪದ್ಮಮಂ
ಸೋಂಕಿ ನಲ್ ಪೂಜೆಯು ಸಲಿಸುವೊಲ್
ಗೈವೆನೆಲ್ಲಂ ಎನ್ನದಲ್ಲದೊಲ್.

ಕವಯಿತ್ರಿ ಕೃತಿಯುಂ ನಿನ್ನಮಲ
ಪಾದ ಪಂಕೇಜಗಳಿಗೆ ಮೀಸಲು
ಹೇ, ಪ್ರಭುವೇ ! ಎನ್ನ ಸೇವೆಯಿದು
ಬೇರೆಯುಲ್ಲವು ತವ ಪದಕಲ್ಲದೆ.

—o—

ಶ್ರಮಿಕ ಜಗತ್ತಿನಲಿ ಶ್ರಮಿಕರ್
    ಒಗ್ಗೂಡಿದೊಡೆ ಕಳೆದುಕೊಳ್ಳುವುದು
ಏನಿಲ್ಲ ; ವೃತ್ತಿಯ ಸಹಜ ನಿಷ್ಠೆ
    ಪಡೆಯೆ ಪ್ರಪಂಚವೇ ಇಹುದು ಕಣ ?

—o—

# ಆಶು ಕವಿತೆ ಮೊಳೆಸಿತು

ಕಡಲ ಮಡಿಯ ಬಾಳ ಗುಡಿಯ
ಬೇಗೆಯಲ್ಲಿ ಬೇಯುತ
ಸುತ್ತಮುತ್ತ ಬಾಳಿನತ್ತ
ದಿಟ್ಟಯಟ್ಟ ನೋಡಿದೆ !
ಮಾತೆಯೆಡೆಯ ಮಗುವಿನಂತೆ
ಒಡೆಯನೆಡೆಯ ಬಡವನಂತೆ
ಬಲವ ನೊಲಿದ ನಾನು ನಿಂತೆ
ಕಡಲ ಮಡಿಯ ಗುಡಿಯಲಿ
ನೀಲ ಜಲದಪಾರಭಾವ
ಪೊಣ್ಮಲಹುದೆ ದನಿಯಲಿ ?

ಕಡಲು ನಿತ್ಯ ಪೊಡವಿ ಸತ್ಯ
ಭಾನು ಭವ್ಯ ಮೆರೆದಿದೆ
ರನ್ನದೊಡಲ ದಿವ್ಯಕಡಲ
ಭಾವನಾದ ಮೊರೆದಿದೆ
ಎದೆಯ ಗಡಲ ಕಾವ್ಯ ರಸನೆ
ಉಕ್ಕಿ ಭಾವ ಬಲಿತು ಸೊಕ್ಕಿ
ಸೊಗವ ಸವಿಯೆ ರಮಣಿ ಕವಿತೆ
ಮೂಡಿ ಬರಲು ಮತಿಯಲಿ
ಭಾವರಾಶಿ ಕವಿಯ ಕವಿದು
ಆಶು ಕವಿತೆ ಮೊಳೆಸಿತು !

—o—

# ನೀ ಬಾರೆಯಾ ಎನ್ನಯ ಪ್ರೇಮದ ಖನಿಯೆ

ದೂರದೂರದಲಿ ನಿಂತು ಹಣಿಕಿನಿಣಿಕಿ ನೋಳ್ಪ
ಸಂಶಯಿತ ದಿಟ್ಟಿಯನಟ್ಟ.  ಏಕೆನಿತೆನಲ್
ಚಿಂತೆ ತವ ಮನಗತಿಯಲಿ ಎಂದಿಲ್ಲದೊಲ್
ಗಾವರಂ ತುಂಬಿ ಬರಲೇಕಂತಳುಕುವೆ ?

ಇಳೆಕಾನಕಡಲಿಂದೆ ಬಿರುಗಾಳಿ ಸೆಳೆಯ
ಕರ್ನೀಲ ಬಾನಿಂದ ಜಡಿಮಳೆಯು ಸುರಿಯೆ
ತಲೆಯೆತ್ತಿ ನಿಲ್ವೆನೆ ಮುಖಾಮುಖಿಯ ತರಲಿ
ಜಗತ್ ಪಾರಾವಾರದ ರೇವಿರಲಿಲ್ಲೆ.

ಸ್ವರ್ಗೀಯ ಸೋಪಾನ ತಿಳಿಯದೇಂ ಮನಕೆ
ಜೀವನೀಯ ಪರಿಪುಷ್ಟಿಯಳಮೆಯ ನುಳಿಯೆ
ನಾಬಲ್ಲೆ ಬಾಳ್ವೆಯಿದು ಸುಖದುಃಖ ಗಣಿಯೆ
ನೀ ಬಾರೆಯಾ ಎನ್ನಯ ಪ್ರೇಮದ ಖನಿಯೆ !

ಬಾಳಿದು ಕಡು ಸಂಕಟದ ಝರಿಯಲಿ ತೇಲೆ
ತೂತು ಬಿದ್ದಿಹ ಹಾಯಿ ದೋಣಿಯನು ಹೋಲಿ
ಮುಳುಗುವೆನೊ ತೇಲುವೆನೊ ನೆಚ್ಚಿರದ ವೇಲೆ
ದೂರದಿಂ ತಿಣುಕುವೇಕಿನ್ನು ಬಾ ಸಾವೆ !

ನಿನ್ನಿಂದೆ ಬಾಳಗೋಳಿಗೆ ಮುಕ್ತಿ ಸಾವೆ !
ನೀ ಬಂದು ಕೊನೆಗಾಣಿಸೆನ್ನ ನಿಡು ಶ್ವಾಸೆ !

—o—

ಬಕುಳ ರಾಜಿ—೪೭

# ಸಹದುಃಖಿ

ಬಲ್ಲೆನೆನಗಿನಿತೆ ಇನ್ನಳವಲ್ಲವೆಂದು
ನೀನರಿತಿರಲದಂ ನಾ ತಿಳಿವ ಮುಂದು
ನನ್ನೊಂದಿಗಿರನುದಿನ ಸಹದುಃಖಿ ಎಂದು !

ಅಣುಶಕ್ತಿಯುತ್ಪತ್ತಿ ಹಿರಿರಾಷ್ಟ್ರಗಳಲಿ
ಮುಗ್ಧ ಜೀವಿಗಳ ಹತಕೆ ಬ್ರಹ್ಮಾಸ್ತ್ರಗಳ
ಕೋಟಿ ತುಂಬುವೊಲ್ ಅದ್ಭುತ ಉತ್ಪಾದನೆ !

ಚಿರರುದ್ರಭೂಮಿಯೀ ನಿನ್ನ ಭುವನದಲಿ
ಕ್ರಂದನವೆ ಹಾಡಿನ ವೊಳಗು ಎಡೆಎಡೆಯಲಿ
ಎನಲೆಮ ಅನುಬಂಧ ತವ ಪರಮ ಉಳಿಯಲಿ !

ಆದೊಡಂ ಕಂಗಳು ಸುರಿಸುವ ಸರಿಯೆನ್ನ
ಭಕ್ತಿಯಿಂ ತೊಳೆದಪವು ಪಾದಗಳ ಚೆನ್ನ
ನೊಂದೆನಕಟ ಕರೆಯೆ ದನಿ ಬತ್ತಿರಲೆನ್ನ

ಕೂಗಿ ಕರೆಯಲಾರೆ ಕರೆಯದಿರಲು ಆರೆ
ಸಹದುಃಖಿ ನೀನಾಗಿರೆನ್ನ ಶ್ರೀ ಗುರುವೆ !

—o—

# ಬವಣೆ ಹರಿಯಲಿ ಸತ್ಯ ಪಥದಲಿ

ನಿನ್ನ ಧ್ಯಾನವು ಎನ್ನ ಮನದಲಿ
ನಾದ ಬುಗ್ಗೆಯ ನಿತ್ಯ ಹರಿಸಲಿ.
ನಿನ್ನ ನೆನೆಯುವ ಚೆನ್ನ ಚಣದಲಿ
ಗಾನ ಶೀಲವ ಬಿತ್ತಿ ಕಲಿಸಲಿ.

ನಿನ್ನ ಪೂಜೆಯು ಪರಮ ಸುಂದರ
ಕಾವ್ಯ ಲೋಕಕೆ ಪ್ರೇಮ ಬಂಧುರ
ನಿನ್ನ ಪೊಗಳುವ ರಾಗ ಮಧುಕರ
ಎನ್ನ ಚಿತ್ತಕೆ ಭಜನೆ ಶ್ರೀಕರ.

ಎನ್ನ ಬಾಳಿನ ಬನ್ನಭಂಗವ
ತಾಳಲಾರದೆ ನೊಂದು ಬೇಡುವೆ
ಬಂದು ಪೊರೆಯ್ಯೆ ನಿನ್ನ ದಾಸಿಯ
ಇನ್ನು ಕೇಳದೆ ಎನ್ನಯ ಮೊರೆಯು ?

ದೇವ ! ನಿನ್ನಯ ಸೇವೆ ಮಾಳ್ಪೆನ್
ಮನದಿ ನೆನೆಯುತ ನಿನ್ನ ಅನುದಿನ
ಎನ್ನ ಬಾಳಿನ ನಿತ್ಯ ಗೋಳಿನ
ಬವಣೆ ಹರಿಯಲಿ ಸತ್ಯ ಪಥದಲಿ

—o—

ಬಕುಳ ರಾಜಿ–೪೯

# ಜೀವನ

ಮೃಗತೃಷ್ಣಾ ಸಮಂ ವೀಕ್ಷ್ಯ
ಸಂಸಾರಂ ಕ್ಷಣಭಂಗುರಂ
ಸಜ್ಜನೈಃ ಸಂಗತಂ ಕುರ್ಯಾತ್
ಧರ್ಮಾಯ ಚ ಸುಖಾಯ ಚ

ಈ ಜೀವನವೊಂದು ಬರಿ ನೀರಿನ ಗುಳ್ಳೆ
ಆವ ಗಳಿಗೆಯಲಿ ಒಡೆದವುದೊ ಈ ಗುಳ್ಳೆ
ಬಾಳಿನ ನೆಲೆ ಬೆಲೆಯರಿಯದೆ ಮುಗ್ಧ ಮನದೆ
ಆಶಾಪಾಶದ ಗುಡಿಯ ಕಟ್ಟುವೆನೆ ದಿನದೆ ?

ಅಳಲೆನಗೆ ಬರಬಾರದೆನಲೊಲ್ಲೆ ದೇವ !
ಸುಖ ದುಃಖ ಬಂದವುದು ಎಲ್ಲರಿಗೆ ಕಾವ !
ಆದೊಡೆ ಜಡಿಮಳೆಗೆ ದಡಂ ಕುಸಿಯುವಂತೆ,
ಬಾಳಿನಾಶೆ ಮೃಗ ತೃಷ್ಣೆಯ ಹಿಡಿವಂತೆ,

ಎಂಬುದ ಅರಿತರಿತು ಕನಸಿನ ಗೋಪುರಂ
ಕಟ್ಟಿ ಪಾಲುಮಾರಿಕೆಯಲೋಲಾಡುತ್ತೆ
ಜಗ ಮರೆತು ಕಳೆಯುತಿರೆ ಕಾಲಮಾನಮಂ
ಇನ್ನೆವರಮಾನುಂ ಕಂಡೆನೇಂ ಮನಶಾಂತಿ ?

ನಿನ್ನ ರಕ್ಷೆಯ ನೆಳಲೆನ್ನಳಲ ತೊಡೆವಂತೆ
ನಿನ್ನ ಕರುಣೆಯ ಕಡಲಲಿ ಮುಳುಗಿರುವಂತೆ
ಜಗ ಮರೆತೆನಲ್ಲದೆ ತವ ಚರಣಂ ಮರೆತೆ
ಈಗಳರಿತು ಬೇಡುವೆ ತವ ದರುಶನ ಕೋರಿ !

— ೦ —

# ಸಿರಿದೊರೆಯೆ

ಅರಿಯೆನೈ ನಿನ್ನಿರುವ ಸಿರಿದೊರೆಯೆ !
ನಿನ್ನ ಕಾಂಬಾಸೆಯಲಿ
ಮಿಡಿಯುತಿದೆ ಪ್ರಾಣ ಹೃತ್ ಗುಡಿಯಲಿ
ನೀನೈತಂದೆನ್ನ ಕಣ್
ಮನ ತಣಿಸೈ ಶ್ರೀವರ ಚನ್ನಿಗನೆ !

ನೀನಲ್ಲದಾರ್ ಪೊರೆವರೆನ್ನಂ !
ನಿನ್ನ ದಾಸಿಯ ಭಂಗ
ಬನ್ನಮಂ ತೊಡೆದು ಪರಮ ಭಕ್ತಿಯ
ಕಾವ್ಯ ರಸಧಾರೆಯಂ
ಮನಃಕಲ್ಪದಲಿ ತುಂಬಿ ಹರಿಸೈ !

ನಿನ್ನ ವರ ಸೇವೆಗಾಗಿ ಅನುದಿನ
ಹಂಬಲಿಸುತಿದೆ ಮನಂ
ನೀನಲ್ಲದಾರ ಪೂಜಿಸಲಯ್ಯ
ಪರಮ ಕರುಣ ಸಾಗರ !
ಬಾರೈ ಹೇ ಎನ್ನ ಜೀವೇಶನೇ !

ನಿನ್ನ ನೀಡಂ ಬಯಸುತಿರಲೆನ್ನ
ಪ್ರಾಣೋತ್ಕ್ರಮಣ ಸಮಯೆ
ನಿನ್ನ ನಾಮಾವಳಿ ನೆನವಿರುವವೊಲ್
ಕರುಣಿಸಿ ಕರವ ಪಿಡಿದು
ಮುನ್ನಡೆಸೈ ಸಗ್ಗದ ಸಿರಿ ಪಥಕೆ !

— ೦ —

# ಕವಯುವಃ ಕಿಂ ನ ಪಶ್ಯಂತಿ

ಕವಿವರ್ಯನ ಅಂತಃಚಕ್ಷು ಕಂಡು
ಕಾಣುತಿರೆ ದಿನದಿನಂ ಜಗತ್ತಿನ
ಸುಖದುಃಖ ವಿಶೇಷ ವೈವಿಧ್ಯವುಂ,
ಲೆಕ್ಕಣಿಕೆಯ ಮಸಿಯೊರತೆಯು ಹರಿದು
ಸೆರೆ ಹಿಡಿಯದೇಂ ಜೀವನ ರೂಪಕಂ
ಪುಸ್ತಿಕೆಯ ಪುಟಪುಟಂ ತುಂಬುವೊಲ್
ಜಗಕೆ ಸತ್ ಸಾಹಿತ್ಯ ರಸವಾಗಿ.
ಜ್ಞಾನರಸನೆಯು ಝರಿ ನೀತಿ ನಿಯಮ
ಶ್ರದ್ಧೆಗಳ ಆವಿಷ್ಕಾರದಗ್ನಿಯು
ಕುಂಡದಲಿ ಧುಮುಕಿ ಝಳಝಳಿಸುತಿರೆ.
ತತ್ತ್ವಮೀಮಾಂಸೆಯ ನಿಜ ಸಾರದ
ಪ್ರಸರಣ ಸ್ಪಂದಿಪುದು ಜ್ಞಾನವುಂ
ರಾಗ ರಸಧಾರೆಯೊಲ್ ದಿನ ನಿತ್ಯಂ.
ಸತತ ಸತ್ ಸಾಹಿತ್ಯ ಸೃಷ್ಟಿಸಿದ
ವರ ಕವಿಗಳೊಗ್ಗರಂ ಜಗಕೆಲ್ಲ
ಜ್ಞಾನದಮೃತಧಾರೆಯೊರೆಯುತಿದೆ
ಕಾಮಧೇನುವಿನ ಕ್ಷೀರದೊಲ್.
ಆದೊಡೇಂ ಅದನರಿತು ಉಂಬುವರ್
ಅತ್ಯಲ್ಪ, ಉಂಡು ಜೀರ್ಣಿಸಿಕೊಂಬರ್
ವಿರಳಾತಿವಿರಳವೆನೆ ಸ್ಪಂದಿಪುದೆ

ಸದ್ಭಾವರಸಕೆ ಈ ಹುಂಬ ಜಗಂ ?
ಜಡವರ್ಗ ಹರುಷಂಬಡೆಯೆ ಕುಕವಿ
ಕೃತ ಕುಲುಷಿತ ಕೀಳ್ ಸಾಹಿತ್ಯ
ರೂಪಕಮೆ ಸಾಲ್ಗುಂ ಎನಲ್ ದಿಟಂ.
ಒಳಿತು-ಕೆಡಕಿನ ದಿವ್ಯ ಸಂಗರಂ
ಜೀವನದಿಯೊಳೊಂದಾಗಿ ಹರಿದಿರೆ
ಅಸತ್ ಜೃಂಭಿಸುವುದು ಸತ್ ಬದಿಗೊತ್ತಿ !
ಒಳಗಣ್ ತೆರೆಯದಿಹ ಮುಗ್ಧದುಗ್ಧತೆ
ಅಸತ್ತಿನಲಿ ಮುಳುಗಿ ತೊಳಗುತ್ತಿರಲ್
ಮನುಕುಲದಿ ಏನೆಲ್ಲ ನಿರೀಕ್ಷಿಪೆ
ಹೇ ಎನ್ನ ಪರಮ ಪಿತ ಶ್ರೀಹರಿಯೇ !
ವರ ಕವಿಯು ಸತ್ ಸಾಹಿತ್ಯ ಸಾರವ
ಬಸಿದುಂಡು ಜೀವನವ ಉದ್ಧರಿಸಿ
ಜನ್ಮ ಪಾವನಗೊಳಿಸಿರ್ಪೈ ಬಂಧುಗಳೆ
ಕವಯುವಃ ಕಿಂ ನ ಪಶ್ಯಂತಿ ?

— ೦ —

ಬದುಕು ನೀರಿನ ಬೊಬ್ಬುಳಿ !
ಅದರಲಿ ಕದಲದೆ ನಿಲುವುವೆರಡು ದಿವ್ಯಾಂಶ !
ಅನ್ಯರಳಲಿಗೆ ಪಡುವ ಮನಮರುಕ
ನೋಣ್ ಗುರಿ ಮುಟ್ಟುವ ಧೈರ್ಯಸ್ಥೈರ್ಯ !

— ೦ —

# ತಂತಿ ಬೇಲಿ

ಭಾರತವರ್ಷದ ಸೀಮಾರೇಖೆಯಂ
ಕಳ್ಳಗತಿಯಲಿ ದಾಂಟಿ
ಚೀನೀ ಕುಜನರ್–ಪಾಕಿಸ್ಥಾನೀ ಕುಮತಿಗಳ್
ಶಿಷ್ಟರಂ ಕಾಡಿ ದುಷ್ಟರಿಗೆ ಚೋದನೆ ನೀಡಿ
ಕಾಡುತಿವೆ ಲೋಕದಲಿ ಮತಿವಂತರ
ಕಣ್ಮುಂದೆ.....ಕಣ್ಮುಂದೆ !
ಗಡಿ ಪ್ರಾಂತೀಯರ ರಣಗೋಳು
ದೇವನೇ ಬಲ್ಲ ಕಾಣಿರೊ !
ದೇಶೀಯರಂ ಜಡಿಕುಟ್ಟಿ ಪಿಂತಿಕ್ಕಿ
ಜೀವನ ಸಂಪದಮಂ
ಎರಡೂ ಕೈಗಳಿಂ ಮೊಗೆದುಂಡು
ತೇಗುವರ್ ನಿಷ್ಕರುಣೆಯಿಂದೆ.
ಪರಕೀಯರ ಉಪಟಳಮಂ ತಡೆಗಟ್ಟೆ
ಭೂಸೇನೆ ಹೋರಾಡಿ ಪ್ರಾಣಮಂತೆತ್ತು
ಪರಕೀಯರಂ ಬಡಿದೋಡಿಸುತಿದೆ
ಆದೊಡಂ ಕಿರುಕುಳಂ ತಪ್ಪಲಿಲ್ಲ.
ನಿತ್ಯನಿರಂತರ ಸುಲಭ ತಡೆಗೆ
ತಂತಿ ಬೇಲಿ ಹಾಕಿ !

ಬರ್ಲಿನ್ ತಂತಿಬೇಲಿಗೆ ಸಮನಿಸಿ
ಭದ್ರ ತಂತಿ ಬೇಲಿ ಕಟ್ಟ
ವಿದ್ಯುಚ್ಛಕ್ತಿಯಂ ಜೊಯ್ಯನೆ ಹರಿಸಿ ಬಿಡಿ !
ನಿತ್ಯ ಘರ್ಷಣೆಯ ಕಹಿ ಪ್ರಕರಣ
ಅಧ್ಯಾಯ ಕೊನೆಗೊಳ್ಳಲಿ,
ಮಸಿಗುಂಡಗಳ ಧಾಳಿ ತಪ್ಪಲಿ.
ದ್ರವ್ಯದ ಅಪವ್ಯಯ
ಬೌದ್ಧಿಕ ಅಪವ್ಯಯ
ಸತ್ಯ ಸಮಯದ ಅಪವ್ಯಯ
ಸ್ನೇಹ ಸಂಬಂಧದ ಅಪವ್ಯಯ
ತಪ್ಪಲಿ....ಒಮ್ಮೆಗೇ ತಪ್ಪಲಿ.....ತಪ್ಪಲಿ.

—o—

ತನ್ನದೇ ಆದ ಸುಳ್ಳು ಪೊಳ್ಳಿನ
ಹೆಬ್ಬಂಡೆಯಂ ಎಡವಿ ಮುಗ್ಗರಿಸಿ
ಯಾರು ಬೀಳ್ವರೋ ಅವರ ರಕ್ಷಣೆ
ಕಡು ಕಷ್ಟವೀ ವಿಶ್ವಲೋಕದಲಿ.

—o—

# ಪ್ರಾರ್ಥನೆ

ಹರಿಯೆ, ನಿನ್ನಡಿಗಳಿಗೆ ಮಣಿಯಲೆಮ
ಶಿರವು ಮಮಕಾರವೆಲ್ಲ
ಸುಟ್ಟುರಿದು ಭಸ್ಮವಾಗುವಂದದಿ.
ಅರಳಲೆನ್ನ ಮನಸುಮ
ನಿನ್ನ ಅಭಯ ಹಸ್ತದ ಹರಕೆಯುಲಿ.

ನಿನ್ನ ಪೂಜೆಗೈಯಲೆಂದಾನು
ಸುಗಂಧಿತ ಪುಷ್ಪವಂ
ಕರುವೊಂದು ಹೇರಾಸೆಯುಲಿ ದೇವ !
ಭ್ರಮರದ್ಭ್ರಮರದೊಲ್
ಅಲೆವೆ ಪೂವಿಂಪೂವಿಗೆ ನಿಚ್ಚಂ.

ನಿನ್ನ ಪದತಲಕೆನ್ನಯ ಹೃದಯ
ಕಮಲವಂ ಅರ್ಪಿಸುವೆ
ಭಕ್ತಿ ಭಾವದಿಂದಲಿ ಹೇ, ಹರಿಯೆ !
ಕರುಣೆಯಿಂ ನೀ ಹರಸಿ
ಕಳೆಯೆನ್ನ ದುರಿತ ಕೋಟಿಯನೆಲ್ಲ.

ತಣಿಯುಲೆನ್ನ ತನುಮನವು ನಿನ್ನಯ
ಅಭಯ ಹಸ್ತ ವರದಿಂ
ನೋಣೆನ್ನ ದುಃಖದುಗುಡಗಳೆಲ್ಲ
ಕಳೆದು ಹೋಗಲಿ ನಿತ್ಯ
ಭವದ ಬಂಧನವ ಪರಿಹರಿಸುವೊಲ್.

—o—

# ಉದಯ ಭಾನು

ಪೂರ್ವೀ ದಿಗ್ ತಟಾಂತ ಲಗ್ನದಲಿ
ಮುಂಬೆಳಕಿನ ಛವಿಯಂ ನೆರೆ ಚೆಲ್ಲಿ,
ದಯಮಾಡಿಸಿದ ಸೂರ್ಯ ಶಿರೋಮಣಿ !
ಮೂಜಗಕೆ ಜ್ಞಾನ ದೀಕ್ಷೆ ನೀಡುವ
ಮಾಳ್ಕೆಯಲಿ ಮುಂಬೆಳಕಿನ ಚೆಲುವನು
ಹರಿಸಿದಂ ಲೋಕೋತ್ತರ ಶೋಭಾ
ಶೈಲಿಯಲಿ ! ಉಜ್ವಲೋಜ್ವಲ ಅರುಣ
ಕಿರಣಮಾಲೆ ರಾಗಾನುರಾಗದ
ಮಾದಕತೆಯಂ ಬೀರುತಿರೆ ಮಂದ
ಪವಮಾನ ಅಪ್ರತಿಭನೆನೆ ಸುಯ್ದು
ಸುಯ್ ಸುಯ್ಯನೆ ಚಾಮರ ವೀಸಿದಂ !
ಮಿಸುನಿಲೇಪವೊರೆದುದೊ ಎನೆ ಹೊನ್ನ
ವರ್ಣಂ ಕನಕರಾಗಕೆಣೆಯಾಗಿ
ನಲಿಯುತಿರೆ ಎನ್ನೆರ್ದೆ ಯದೃಚ್ಛೆ
ಘನಿಸಿ ಕಣ್ಮನ ಕೀಲಿಸಲಾರದೆ
ನಿಂತೆನಲ್ಲೆ ವೈಮನ ಮರವಟ್ಟು.
ಏನುದ್ಭುತವಿದಾ ವಿಶ್ವಲೋಕದ
ಮಹತ್ ಪ್ರಜ್ಞಾನ ಪ್ರತಿಷ್ಠಾನ !
ಮನಃಮತಿಗಳ ಮಂಥನಾವೇಶ
ತತ್ತರಿಪೊಲ್ ಅದ್ಭುತ ಪ್ರಸ್ಥಾನ !
ನಮೋನಮೋ ಜಗತ್ ಪ್ರಣಾಳಿಕೆಗೆ !
ನಮೋ ನಮೋ ನೀತಿ ನಿಯಮಗಳ ರುದ್ರ
ಸಂಚಾಲನೆಗೆ !!

—o—

ಬಕುಳ ರಃಜಿ-೫೭

# ಕಾರಿರುಳು-ಕಾರ್ಮಿಂಚು

ಹಗಲಿನ ಬೆಳಕನು ಇರುಳಲಿ ನುಂಗುವ
ಕರ್ರನೆ ಕಾಳಿಯೆ ಕಾರಿರುಳು
ಮೆಲ್ಲನೆ ನಡೆಯುತ ಕಾಳಿಕೆ ಮುಂಬರೆ
ಫಳ್ಳನೆ ಹೊಳೆಯಿತು ಕಾರ್ಮಿಂಚು.

ಕೆದರಿದ ಕೇಶದ ಕರ್ರನೆ ಕಾಯದ
ಕಾಳಿಕೆ ಮುಂಬರೆ ಕಾರಿರುಳು.
ಮೋಡಗಳ ಮಾಲೆ ಕಗ್ಗಪ್ಪು ತಳೆಯೆ
ಫಳ್ಳನೆ ಎರಗಿತು ಕಾರ್ಮಿಂಚು.

ಕಾಳಿಯ ಕೋಪದ ಕೂರ್ಗಣೆ ಕಣ್ಣಿನ
ಎವೆಗಳು ಮುಚ್ಚಿರೆ ಕಾರಿರುಳು
ಒಡಲಿನ ಕಿಚ್ಚನು ಕಾರುವ ಕಿಡಿಗಳ
ಚಟಾಕಿ ಸಿಡಿದರೆ ಕಾರ್ಮಿಂಚು

—o—

# ದೇಹಾತ್ಮ

ಆತ್ಮ-ಪರಮಾತ್ಮನ ನಂಟು
ವಿರಿದೆಂತಂತು
ದೇಹಾತ್ಮನ ಪರಮ ಸಿರಿ ಗಂಟು
ಸಾಮಾನ್ಯಮಲ್ತು.

ಜೀವನ ಪರಿಪೋಷಣೆಗೆ
ಸಾಧನವಾದ
ದೇಹ-ಧೀರೋದ್ದಾತ್ತ ದೇಹ
ಸರ್ವ ಸಾಧನೆಗೆ
ತಾನಾಗುವ ದಿವ್ಯ ಸಂಪುಟ
ಸಾಮಾನ್ಯಮಲ್ತು.

ಸತ್ಯ ಧರ್ಮಗಳ ನೇಮದಲಿ
ದಿನನಿಚ್ಚ ಪೂಜೆಗೈದು
ಏಕಾಂತ ಧ್ಯಾನದಿಂ ತಪಗೈದು
ಭಜನೆಗೇಯಮಂ ಹಾಡಿ
ವೀಣೆ ಬಾಜಿಸುತ ಸೇವಿಪದೇಹ
ಸಾಮಾನ್ಯಮಲ್ತು.

ದೀನದಲಿತರ ಕೂಪದಿಂದೆತ್ತಿ
ಧರ್ಮದ ಹಾದಿಗೊಯ್ವ
ವೇದ ಸಾರವರಿತು ಸದಾ
ಆಧ್ಯಾತ್ಮ ಚಿಂತನೆಗೆ
ತಾನೇ ತಾನಾಗುವ ಉತ್ತಮ ದೇಹ
ಸಾಮಾನ್ಯಮಲ್ತು.

—o—

# ಓ! ಬಾನಾಡಿ ನೋವು ನಿಡಿಗಳೇ

ಚಿತಾದಹತಿ ನಿರ್ಜೀವಂ
ಚಿಂತಾದಹತಿ ಜೀವಿನಂ

ಬನ್ನಿ. ಬನ್ನಿ. ಬನ್ನಿ. ಬನ್ನಿ

ಓ ! ಬಾನಾಡಿ ನೋವು ನಿಡಿಗಳೇ !
ತೆರೆ ಮರೆಯಲಿದ್ದು ಹಂಗಿಸುವಿರೇಕೆ ?
ಮುಂಬನ್ನಿ, ಎದುರು ನಿಲ್ಲಿ ಎಂದು ಕೂಗುತೆ
ಬೇಡಿ ಬೇಡಿ ದಶಕ ದಶಕಗಳೇ ಉರುಳಿಹೋದುವು!
ಕಳೆಯಿತು ಕಾಲಮಾನ ; ಉರುಳಿತು ಆಯುರ್ಮಾನ.
ಇನ್ನಾದರೂ ಬೇಸರಿಸದೆ ಬನ್ನಿ
ದಯಾರ್ದ್ರಮದುರ ಮನದಿಂದೆ ಹರಸ ಬನ್ನಿ.
ಜೀವನಾದರ್ಶ ಕೈ ತಪ್ಪಿದಾಗ
ಸತ್ಯಧರ್ಮಗಳು ಗತಿಗೆಟ್ಟಾಗ
ಧರ್ಮ–ನೀತಿ–ನ್ಯಾಯಗಳು ಪಥತಪ್ಪಿ
ಮಣ್ಣ ಹುಡಿಯಲಿ ಹುಡಿಯಾಗಿ ಬೆರೆತಾಗ
ಸುಖಸ್ವಪ್ನಗಳು ಕರಗಿದಾಗ
ಮೈಮನ ಉರಿದುರಿದು ದುಃಖದಿಂ
ಪರಿತಪಿಸಿ ಭಸ್ಮವಾಗುತ್ತಿರುವಾಗ
ನೀವಲ್ಲವೇ ಸ್ವಾಂತನಗೊಳಿಸುವವರು....?

ಐಸಿರಿಯ ಕೂಗಿ ಕರೆದೆ ನಾನು
ಓಗೊಡದೆ ಸಿಡಿದು ದೂರ ಸರಿಯಿತು.
ಸುಖ ಸ್ವಪ್ನ ಬಯಸಿದೆ ನಾನು
ಸ್ವಪ್ನವಿರಲಿ ನಿದ್ದೆಯೂ ಈ ಬಳಿಯಲಿ

ಸುಳಿಯದಿರೆ ಹೊರಳಿದೆ ನಾನು.
ಭಕ್ತಿ–ಪ್ರೀತಿಗಳಿಂ ಕೈಮುಗಿದು ಬೇಡಿದೆ
ಬಲವಂದು ದೂರದೂರ ಸರಿಯಿತು ಪ್ರೀತಿ.
ಭಕ್ತಿಯ ಕಂಬನಿ ಕಾಣಿಕೆಯಿತ್ತೆ ನಾನು
ಕರುಣೆ ಈ ಬಳಿಯಲಿ ಸುಳಿಯಲಿಲ್ಲ.
ಕೂಗಿ ಕರೆದೆ ಸಾವನ್ನು.
ಆ ಮೃತ್ಯುದೇವ ಬೇಕೆಂದಾಗ ಬಂದಾನೆಯೆ ?
ಜಟಿಲ ಸಮಸ್ಯೆ ಸುಲಭದಿ ಬಗೆ ಹರಿಸುವೆನೆನೆ
ಸಾವೂ ಇಲ್ಲ ; ಗೋಳೂ ತಪ್ಪಲಿಲ್ಲ.
ನೀವಾದರೂ ಬನ್ನಿ ನೋವುಗಳೇ !
ಎನ್ನ ಜೀವನಾಡಿ ಸಂಗಡಿಗರೇ !
ಹೃದಯ ಹಿಂಡಿ ಹಿಸುಕ ಬನ್ನಿ !

ಬಾಳ್ಬನದ ನೋವು ನಲಿವುಗಳ ತುಂಬಿ
ಕವಿತೆ ಕೀಚಿ ಕೀಚಿ ಬರೆಯಲೇ ?
ಕಥೆ-ಕಾದಂಬರಿ ಬರೆಯಲೇ ?
ಬಂಡಾಯ ಸೂತ್ರ ಹಿಡಿಯಲೇ ?
ಹಾರಾಡಿ ಚೀರಾಡಿ ಕುಣಿವೆನೆಂದು
ಕಾಲ್ಗಳ ನೆಲಕಪ್ಪಳಿಸುವೆನೆ
ವಾತರೋಗದ ಬೇನೆಯುಕ್ಕರೆ
ಗಂಟು ಗಂಟಿಗೆ ಅಂಟಿರೆ ನೋವಿನಳ್ಕರೆಯಿಂ
ಬಂಡಾಯಕೆ ಧಿಕ್ಕಾರ !
ಬಾಳ್ಬನದ ತೋಳಗಳ್
ಬಾಯಿಕಿಸಿದು ಸುತ್ತಮುತ್ತ ಮುತ್ತಿರೆ
ಎಲ್ಲಿಯ ಜೀವನ ಶಾಂತಿ ?
ಜನ ಜಂಗುಳಿ ತುಂಬಿರ್ದ ಮನೆಯಾದರೇಂ ?
ನಾನೇಕಾಂಗಿ ! ಏಕಾಂಗಿ ! →

ದಿನದಿನಂ ಬಲಿ ಬೇಡುವ ಪಿಶಾಚಗಣದಿಂ
ದೂರ ದೂರ ದೂರವಾಗೆ
ನೇಣ್ ರಕ್ತ ಪಿಪಾಸಿಗಳಿಂದೆ ದೂರ ಸರಿಯೆ
ನಾನು ಎದ್ದೇಳಲೇ ಬೇಕು ; ಏಳಲಾರೆ ದೇವ ?
ಗಂಟು ಗಂಟಿನ ನೋವು ಅದುಮಿ ಒತ್ತಿ
ಕೂರಿಸುತ್ತವೆ ಅಷ್ಟೆ ; ಕೊನೆಯ ತಾರವು !

ಎಂತೆನ್ನ ಸುತ್ತಮುತ್ತಿನ
ಕೂರಾತಿಕೂರ ದುರ್ಗಣಗಳ ನಿವಾರಣೆ ?
ಎನ್ನಂ ಸಿಡಿದೇಳಿಸುವ ಸ್ಫೂರ್ತಿ
ಕಡು ನೋವಿನ ಸ್ಫೂರ್ತಿ ಬೇಕು !
ನೋವುಗಳೇ ! ಓ, ನನ್ನ ನೋವು ನಿಡಿಗಳೇ !
ನೀವೇ ಓಡಿ ಬಂದು ಏಳಿಸಿ ನನ್ನ !

ಜೀವನದನುಭವ ಪರಿಪಕ್ವವಾಗಿ
ಮನಃಕಲ್ಪ ಅರಳಿ ಹೂವಾಗಿರೆ
ಬಾಳಿನಜ್ಞಾನವಾಸದಂಕ
ಮುಗಿದು ಮುಂದಿನಧ್ಯಾಯ ತೆರೆದಿದೆ
ವರ್ತಮಾನ ಯುಗಧರ್ಮದ ನಾಗರಿಕ
ಮಾರ್ಗಯೋಗ ಕಣ್ಣ ಮುಂದಿದೆ
ಏಳಲಾರೆ.....ನಡೆಯಲಾರೆ.
ಮಾನಸಿಕ ನೋವಿನ ವಿರುದ್ಧ,
ಹೃದಯದ ನೋವಿನ ವಿರುದ್ಧ,
ಗಂಟು ಗಂಟುಗಳ ನೋವಿನ ವಿರುದ್ಧ
ಯುದ್ಧ ಹೂಡದೆ ಗತಿಯಿಲ್ಲ.
ನನ್ನ ಸಿಡಿದೇಳಿಸುವಂತಹ ನೋವು ನಿಡಿಗಳೇ !
ಎಲ್ಲಿದ್ದರೂ ಬನ್ನಿ ಸಹಾಯಕ್ಕೆ !

ಅಸಹಾಯಕತೆಯಿಂದೆ
ಲೋಕವೆಲ್ಲ ನೋಡುತಿದೆ ನನ್ನ
ಏಳಿಸುವರಿಲ್ಲ....ಸಂತೈಸರಿಲ್ಲ.....

ಸ್ವಜನ ಶೀಲವ ಅಳಿಯ ಬನ್ನಿ.
ಮನಃಕಲ್ಪವ ಅರಳಿಸ ಬನ್ನಿ.
ಪಾಪಕೂಪದಿಂದೆತ್ತ ಬನ್ನಿ.
ನಿಜ ನನ್ನಿಯ ತೋರ ಬನ್ನಿ.
ನನ್ನಾತ್ಮಕೆ ಮೂರ್ತರೂಪವ ನೀಡ ಬನ್ನಿ.
ಕೊನೆಯತನಕ ಕೈಬಿಡದಿರಿ
ಓ ! ಎನ್ನ ನಿಜ ಬಂಧುಗಳೇ !

—o—

ಪ್ರಪಂಚದಲಿ ಎಣೆಯೆ ಇಲ್ಲದೊಲ್
ವಿಚಿತ್ರಗಳ ಹಣಾಹಣಿಗಳುಂಟು.
ಅವುಗಳಲಿ ತೀರ ವಿಚಿತ್ರವೆಂದೊಡೆ
ಮಾನವೀಯತೆಯಿಲ್ಲದ ಮಾನವ !

—o—

# ಮುಂಗಾರಾನಿಲ

ಪಚ್ಚನೆ ಪರ್ಣಾರ್ಣವದಲಿ ಒಯ್ಯನೆ
ಸುಳಿಸುಳಿದಾಡುತ, ತಳಿರುಗಳ
ವರ್ಣವೈಭವದಲಿ ನಲವಿಂ ಒಲವಿಂ
ಮುಂಗಾರಾನಿಲ ಸುಳಿಯುವನು.

ಚಿಣ್ಣರು ಸರಸದಿ ಆಡುವ ಬಯಲಲಿ
ಏಳುತ ಬೀಳುತ ಕೂಗುತಿಹ
ದಂಢೆಯ ಕೂಡಾಡಿ ಚೆಂದದಿ ಮುದ್ರಿಸಿ
ಮುಂಗಾರಾನಿಲ ಸುಳಿಯುವನು.

ಮೇಘಗಳೋಲಾಡುವ ಅಂಬರದಲಿ
ಸುಯ್ ಸುಯ್ಯನೆ ಸುಯ್ದು ಸುಳಿಯುತ
ಒಯ್ಯನೆ ಮೇಘಗಳ ತಳ್ಳುತ ದೂರ
ಮುಂಗಾರಾನಿಲ ಸುಳಿಯುವನು.

ಜಾಡಿಸಿ ಬೀಸುತ ಭೋರನೆ ಜಡಿಮಳೆ
ಸುರಿಸುತ ಭೂಮಿಗೆ ಮಿಸುನಿ ಬೆಳೆ
ತರಿಸಲು ಭ್ರಾಮಕ ಮೋದದಿ ನುಗ್ಗುತ
ಮುಂಗಾರಾನಿಲ ಸುಳಿಯುವನು.

—o—

ನಾಸ್ತಿ ಜಾಗರತೋ ಭಯಂ

ಪ್ರಭುವೇ ! ಇಂದೆನ್ನ ಕೈಸೇರಿತ್ತೈ
ಎಂದೋ ನೀ ಬರೆದ ನಲ್ಮೆಯ ಪತ್ರ
ಪ್ರೇಮದ ಝರಿಯಲಿ
ಉಕ್ಕಿ ಹರಿದ ಅಕ್ಕರೆಯ ಪತ್ರ !
ಹಾ ! ಎನಿತಂದ ! ಎನಿತು ದಿವ್ಯವಾ
ನೀ ಬರೆದ ಪರಮ ಪತ್ರ !
ಕಣ್ಣಿಗೊತ್ತಿ, ಮುದ್ದಿಟ್ಟು, ಹೃದಯಕ್ಕೊತ್ತಿ
ಮಗುವಿನೊಲ್ ಹಿಡಿದಿರುವೆ !
ನಿನ್ನ ಮುದ್ದಾದ ಹಸುರು ಪತ್ರ
ಪಚ್ಚೆಯಂ ಕೋದ ರನ್ನದೊಡವೆಯೊಲ್
ಸುಸುಂದರವಾದ ಪತ್ರ !
ಆದೊಡೇಂ ಪ್ರಭುವೇ !
ಅಕ್ಕರವರಿಯದಾನು
ಓದಲಾರೆ–ಓದಿ ತಿಳಿಯಲಾರೆ
ಎಂತನುಭವಿಸಲೀ ಸಂಕಟವ ?
ಸೋದರನೊಡನೆ ಓದಿಸುವೆನೆ
ಗುಟ್ಟು ಬಯಲಾಗದೇ ಸ್ವಾಮಿ ?
ಎಂತರಿಯಲೀ ನಿನ್ನಯ ಪ್ರೇಮಮಯ
ಪತ್ರಸಾರಮಂ ?
ದಾಳಿಂಬೆ ಮರದಲೊಂದು ಗಿಳಿ
ಇತ್ತಲೇ ನೋಡುತಿದೆ ಕೊರಳ್ ಕೊಂಕಿಸಿ
ಕರೆದು ಓದಿಸುವೆನೆಂದೊಡೆ
ಅದು ಪತ್ರವಂ ಕಚ್ಚಿ ವಿಡಿದು

→

ಪಾರಿಪೋದಡೇಂ ಗತಿ ?
ಕಾಲ ಬಳಿಯೆ ಕಾದು ಕುಳಿತಿದೆ ಜೂಲು ನಾಯಿ,
ಅದರೊಡನೆ ಓದಿಸುವೆನೆನೆ ಧೈರ್ಯವಿಲ್ಲಂ.
ಅದು ಕಾಗದವಂ ಹರಿದು
ಚೂರು ಚೂರುಗೈವುದೇ ದಿಟಂ.
ಏಂಗೈಯುಲಿ ಎನ್ನಪ್ರಭುವೇ !
ಕಾಗೆ ಕೂಗುತಿದೆ
ಕಾಯೆಂದು ನೋನೋಡುತಲೆನ್ನಲಿಹ
ಪರಮ ಪ್ರೀತಿಯ ಪತ್ರವನ್ನ.
ಆದಡೊದಂ ನಂಬಲಾರೆನೋ
ದೇವಾದಿದೇವ !
ನಂಬಿ ಓದಲೀಯಲಾರೆ ಪ್ರಭುವೇ !
ಪತ್ರಸಾರವರಿಯ್ದುದಿರೆ
ನಷ್ಟವೇನಿಲ್ಲವೈ.
ನಿನ್ನ ಬಲ್ಮೆಯ ಪತ್ರವೆನ್ನೊಳಿರೆ ಸಾಲ್ಗುಂ
ಸಾರವರಿಯಲೇಕೆ ಪಂಬಲಿಸಲಿ ?
ನಿನ್ನ ನಲ್ಮೆಯ ಪ್ರೇಮದೊಕ್ಕಣೆ
ಇರುವುದೊಂದೇ ಸಾಕು ಪ್ರಭುವೇ !
ಹಗಲಿರುಳ್ ಪತ್ರವಂ
ಹೃದಯದಿಂ ಕದಲಿಸಲೊಲ್ಲೆ
ಎನಗದೇಹಿತ. ಎನಗದೇ ಆನಂದ.
ಪ್ರಭುವೇ ! ನಿನ್ನ ಪರಮ ಪತ್ರ
ಎಂದೆಂದಿಗೂ ಹಚ್ಚಹಸುರಾಗಿರಲಿ
ಎನ್ನ ಹೃದಯಮಂದಿರದಲಿ.

—೦—

ಸಂದುವಾ ದಿನಮಾನ ಎಂದಿನೊಲೆ
ಬಾಲಲೀಲಾ ವೃತ್ತಿಯಿಂ ಸಹಜ
ಪ್ರವೃತ್ತಿಯೆನೆ ತೋಷಮೋದದಿಂ !
ಬಾಲ್ಯದಲಿ ಕಳೆದ ಸುಂದರ ದಿನಂ
ಇಂದು ಬೆಲೆಯಿರದ ಕಂತೆಯ ಬೊಂತೆ !
ಅಂದ ಚೆಂದದ ಆಟ ಪಾಠಗಳು
ನಕ್ಕುನಲಿದ ನಗೆ ಚಾಟಿಕೆ ಮಾತು
ಇಂದು ಬಯಸಿದೊಡೆ ಬರುವುದೆ ಮರಳಿ ?
ಮತ್ತೆ ಮೈಗೂಡಿ ಮೆರೆವುದೆ ಇಂದು ?
ಅಂದಿನ ದಿನಮಾನಂ ಅಂದಿಗೇ,
ಇಂದಿನ ದಿನಮಾನಂ ಇಂದಿಗೇ,
ನರ ಜನುಮದೋಳ್ ಆವಿರ್ಭವಿಸಿ
ಜೀವನೀಯಸಾರ್ಥಕತೆಯಿಲ್ಲದ
ಬದುಕೊಂದು ಬದುಕಲ್ಲವೋ ಒಡೆಯಾ !
ಬುದ್ಧಿಮಾನ್ಯರ ವ್ಯರ್ಥ ಬಾಳ್ಬದುಕು
ಬರಿ ಕ್ರಿಮಿಕೀಟಗಳ ಮಾಳ್ಕೆಯಲಿ
ನಿನ್ನುಡಿಗೆ ಸಂದೊಡೀ ಜೀವನಕೆ
ಸುಸುಂದರ ಬರ್ದಿಲವದೇನೊಡೆಯ ?
ಜೀವಿತಂ ಅಲ್ಪವೇ ಆದೊಡಂ
ಬರ್ದಿಲಮೆ ಸುಜೀವನ ಸಾರ ಕಣ !

—o—

## ಪ್ರಭು ಎಲ್ಲಿಹನು?

ಓ, ಪ್ರಭುವೇ! ಎಲ್ಲಿರುವೆ ನೀನು ?
ಆವುದು ತವ ಪವಿತ್ರತಮ ಬೀಡು?
ಸೃಷ್ಟಿಕರ್ತಂಗೆ ತೆರೆಮರೆಯೇಕೆ ?

ದೀನರೊಳ್ ದೀನ ಜನರಿರುವಲ್ಲಿ
ಅಧಮರೊಳ್ ಅಧಮಜನರಿರುವಲ್ಲಿ
ನೀನಿಲ್ಲದಿರ್ಪುದೆಂತು ಸಾಧ್ಯವೈ ?

ಎಲ್ಲಿ ಸಂಕಟವೊ ಎಲ್ಲಿ ಕಷ್ಟವೊ
ಅಲ್ಲಿ ತವಚರಣ ರಾರಾಜಿಪುದು
ಕರುಣೆ ದಯೆ ಪ್ರೇಮಗಳ ಗಣಿಯಾಗಿ.

ದುರ್ಬಲರ ಬಳಿಯಲಿ ನಿರ್ಗತಿಕರ
ಸಂಗಡದಲಿ ನೀನಹೆ ಪಗಲಿರುಳ್
ನೇಹದ ಅಭಯ ಹಸ್ತಮಂ ಚಾಚಿ.

ಭವದೀಯ ಭಂಗ ಧಾಮದಲಿ ನೆರೆ
ಬೆಂದು ಬೇಯುತ ನೊಂದು ನೋಯುತಿಹೆ
ನಿನ್ನ ಹಾದಿಯಲಿ ನಾಂ ಕಣ್ಣಿಟ್ಟು.

ಓ, ಸಿರಿದೊರೆಯೇ! ಎನ್ನನೇಕಿಂತು
ಮರೆತು ನಡು ನೀರಿನೊಳು ಕೈಬಿಟ್ಟಹೆ ?
ನೀನಲ್ಲದಾರ್ಯೆ ಗತಿಯೆನಗಿಂದು ?

—o—

# ದೀಪಾಂಜನ

ಪೊತ್ತುರಿವ ದೀಪಾಂಜನವ ಪಿಡಿದು
ನಡೆದಿರ್ದ ಬಾಲೆಯಂ ಕಂಡೊರ್ವ
ಬಡವೃದ್ಧೆ ಆಸ್ತೆಯಿಂ ಬೇಡಿದಳ್
'ಎಲೆ ಬಾಲೆ ಕತ್ತಲೆಯಲಿ ನಾನಿಹೆ
ದೀಪಾಂಜಲಿಯನಿಲ್ಲಿ ಉರಿಸು ಬಾ'
ಕೈವೀಸಿ ಕರೆದ ವೃದ್ಧೆಯ ಕಡೆಗೆ
ನೋಡಿದಳ್ ಎಳೆ ಬಾಲೆ ಕರುಣೆಯಿಂ.
ಆದೊಡದು ಶಿವನಿಂಗೆ ಮೀಸಲಿರೆ
ಈವುದೆಂತಜ್ಜಿಗೆನಿಸಿ ನಡೆದಳ್
ಗುಡಿಗೆ ದೀಪ್ತಿಯ ಕುಡಿಗೆ ಹಸ್ತಮಂ
ಅಡ್ಡ ಹಿಡಿದು ಗಾಳಿಯ ತಡೆಗಟ್ಟಿ.
ಶಿವನೆಮಗೆ ಬೆಳಕೀಯುವನಲ್ಲದೆ
ನಾವೇಂ ನೀಡಬಲ್ಲೆವು ಶಿವನಿಂಗೆ ?
ಓ ಪ್ರಭುವೇ ! ನೀನೆ ಉರಿಸೆಲ್ಲೈ
ದೀಪಾಂಜನಂ ಧರೆಯ ಮನೆಮನೆಗೆ.

—o—

# ಶೃಂಗಾರ

ವಿನಯೋ ರತ್ನಮುಕುಟಂ
ಸಚ್ಛಾಸ್ತ್ರಂ ಮಣಿ ಕುಂಡಲೇ
ತ್ಯಾಗಶ್ಚ ಕಂಕಣಂ ಯೇಷಾಂ
ಕಿಂ ತೇಷಾಂ ಜಡಮಂಡನೈ ॥

ಓಹೊ ! ಈ ಜಡದೇಹಕೇನಂತ
ಶೃಂಗಾರವೋ, ಹೇ ! ಪರಮಾತ್ಮನೇ !
ಥಳಥಳಿಪ ವಜ್ರಾಭರಣ ಮೇಣ್
ಕಿವಿ ಮೂಗು ನತ್ತುಗಳ ಭಯಂಕರ
ವ್ಯಾಮೋಹದಾ ಹುಚ್ಚಿನಲಿ ಬಾಯ್
ಬಿಡುತೆ ಅಮಿತ ಅಮೂಲ್ಯ ದ್ರವ್ಯವಂ
ಕಣ್ಮುಚ್ಚಿ ಪಾಳುಗೈದಪರ್ ಜಡ
ಮತಿಗಳಪ್ಪ ಮನುಕುಲಜರ್ ದೇವ !
ಕಾಮುಕಾಮನೆಗಳ ಹಿರಿ ಪಿಪಾಸೆ
ಜ್ಞಾನ ಸರಿಯ ಬಿಂದು ಬಿಂದುವಂ
ಹೀರಿ ಕಿರುಮನೋಮಂದಿರದ ಘನ
ತಮೋರಾಶಿಯಂ ಮುಂಬೆಳೆಸುವುದು !
ಓ ! ಪ್ರಭುವೇ ! ! ಜಡಮತಿಯ
ಅರ್ಥಹೀನ ಜಾಡ್ಯಮಂ ನೀನಲ್ಲದಾರ್
ತೊಡೆದಪರ್ ಪರಿಭಾವಿಸಿ ನೋಡೈ !

—೦—

# ಸಿರಿಗನ್ನಡಂ ಗೆಲ್ಗೆ

ಕನ್ನಡಿಗರುಂ, ಕನ್ನಡ ನುಡಿಯುಂ ಒಕ್ಕೂಡಿ
ಬೆಸೆದ ಭಾವೈಕ್ಯತೆಯ ವಜ್ರಲೇಪವೇ ಸೆಲೆ
ಸಂಸ್ಕೃತಿ ಸತ್ಕೀರ್ತಿಗಳ ಪರಂಜ್ಯೋತಿ ಕಣ !

ಕನ್ನಾಡಿನ ಪರಮೋದ್ಧಾರ ಹಲವು ದಿಶೆಯಿಂ
ಹಲವು ಬಗೆಯಿಂ ಒಮ್ಮನ ಒಮ್ಮತಗಳಿಂ ನೆರೆ
ಕೈಗೂಡಿ ಬಂದಲ್ಲದೆಲ್ಲಿಯುದ್ಧಾರವೈ ?

ಕನ್ನಡಿಗರಲಿ ನವ್ಯಶಕ್ತಿ ನವ್ಯಚೇತನ
ಮೂಡಿಬಾಳುತಿರೆ ಈ ಜೀವನೀಯ ಅನನ್ಯ
ಆವಿಷ್ಕಾರಕೆ ಸತ್ಯ ಸಾಹಿತ್ಯ ಉಪಕರಣ ಕಣ !

ಕನ್ನಡದ ಕಾಮಳ್ಳಿ ನಲವಿಂದ ಹಾಡುತಿರೆ
ಕನ್ನಡದ ಕೀರ್ತಿ ಪಟಲ ನಭದಲಿ ಹಾರುವೊಡೆ
ಕನ್ನಾಡಿಗೆ ಕನ್ನಡ ಸಿರಿಭಾಷೆಯೆ ಮುಖ್ಯಗತಿ !

ಅಂದು ಕನ್ನಡ ಭಾಷೆ ಕಡೆಗಣ್ಣೆ ಮುಳುಗಲಿರೆ
ಇಂದು ತನುಗೂಡಿ ಗ್ರಂಥಸ್ಥಮಾದ ಕವಿಕಾವ್ಯ
ಮಾತ್ರವಲ್ಲ ಘನ ಸಮುದಾಯುದ ಪರಭಾಷೆ !

ಸುಜ್ಞಾನ ವಿಜ್ಞಾನ ತಂತ್ರಜ್ಞಾನಂಗೂಡಿ
ಅಂದ ಚೆಂದದಿಂ ಮುಪ್ಪುರಿಗೊಂಡ ಬಾಳಿಂದೆ
ಕುರುನಾಡ ವೈಭವಂ ವೈಭವೋಪೇತ ಕಣ !

→

ಕನ್ನಾಡು ಮೇಣ್ ಕನ್ನಡ ಭಾಷೆಗಳ್ ಮಿನ್ನೆ
ಹರಿದು ಛಿದ್ರವಿಚ್ಛಿದ್ರವಾಗಿರ್ದುದು.  ಇಂದದು
ಆಳ್ವ ರಾಜ್ಯ ಮೇಣ್ ರಾಜ್ಯ ಭಾಷೆ ಗಡ !

ಕನ್ನಾಡಿನ ಕಂಪುಗುವ ಕನ್ನಡ ಭಾಷೆಯಿಂ
ಸಂಸ್ಕೃತಿಯಿಂ ಮೇಣ್ ಸಾಹಿತ್ಯ ಸಂಪದದ
ಸಂಮಿಶ್ರಣವೆ ಸುಂದರ ಸೊಬಗಿನ ಸಂಜೀವನ.

ಸರ್ವತೋ ಮುಖೀ ಪ್ರತಿಭೆ ಮೇಣ್ ಜೀವನದ
ಸುವಿಕಾಸಮಾನ ಊರ್ಧ್ವಮುಖೀ ಬದುಕು ನಿನ್ನ
ರಾಜ್ಯದಲಿರೆ ಅದೇ ಪ್ರಗತಿ ತಿಳಿಯೈ ಕನ್ನಡಿಗ !

ಹಂತ ಹಂತದೊಳೇರುತ ಸ್ವಭಾಷೆಯುಲಿ ಜ್ಞಾನ
ವಿಜ್ಞಾನ ಸುಜ್ಞಾನಗಳ ಪ್ರತಿಶೋಧವಂ
ಮನಗೊಂಬುದೆ ವಿದ್ಯಾ ಕೌಶಲ್ಯದ ನಿಜಪಾಯ.

ಮತ-ಧರ್ಮಗಳಿಂ ಪ್ರಭಾವಿತ ಅನುಬೋಧಿತ
ದೃಢ ನಂಬುಗೆಯೆ ಮೂಢನಂಬಿಗೆಗೆ ತಳಹದಿ.
ಮನದಿ ಜಾನಿಸಿ ಸಂಸ್ಕೃತಿಯರಿಯೈ ಕನ್ನಡಿಗ !

ನಿನ್ನೊಳಗಣ ಈಶ್ವರೀ ಚೈತನ್ಯಮಂ ಅರಸಿ
ಮತ್ತದರ ವಿಶ್ವತೋಮುಖಿ ವ್ಯಾಪ್ತಿಯಂ ಅರಿತು
ಸತ್ ಚೈತನ್ಯ ಪ್ರಸರಣವ ಮನಗೊಳ್ಳೈ ಕನ್ನಡಿಗ !

ಕನ್ನಡಿಗರೆನೆ ಕನ್ನಡಕೆ ಸಲ್ಲುವ ಗೌರವ !
ಕನ್ನಾಡೆನೆ ಕನ್ನಡಕೆ ಸಂದ ಗೌರವ ರಕ್ಷೆ !
ಕನ್ನಡ ನುಡಿಯೆನೆ ಕನ್ನಡ ಕತ್ತುರಿ ಶ್ರೀಗಂಧ !

→

ಕನ್ನಡ ನುಡಿ ಕನ್ನಡ ದೇಶ ಇಂದು–ನಿನ್ನೆಯು
ಹೊಸಲ್ಲ. ಪುರಾತನ ದೇಶ ಮೇಣ್ ಭಾಷೆಯು
ಇತಿಹಾಸ ಅದ್ಭುತ ವಿಚಾರವಿಸಾರಿ ಗಡ !

ಏಳು ! ಜಡ ನಿದ್ದೆಯಿಂ ಎದ್ದೇಳು ! ಜೀವನದ
ಹೆಗ್ಗುರಿಯ ಲಕ್ಷ್ಯದಲಿ ಓಡಿಯೋಡಿ ಪಿಡಿಯೈ
ದೂರಗವ್ಯದ ಕಿರಣ ರೇಖಾ ಪಥ ಕನ್ನಡಿಗ !

ಕನ್ನಡಕ್ಕಾಗಿ ಕೈಎತ್ತಿ ಧ್ವಜ ಏರಿಸು !
ಕನ್ನಡಕ್ಕಾಗಿ ಬೆರಳೆತ್ತಿ ಜಯಗೀತ ಹಾಡು !
ಕನ್ನಡಕ್ಕಾಗಿ ಕೊರಳೆತ್ತಿ ಶಂಡರ ನೆಚ್ಚರಿಸು !
ಸಿರಿಗನ್ನಡಂ ಗೆಲ್ಗೆ !

—o—

ಪ್ರತಿಯೊರ್ವ ಮನುಜನ ಎರ್ದೆಯಲಿ
ಒಂದೊಂದು ಬಗೆಯು ಕಾಡು ಪ್ರಾಣಿಯು
ಆವಿರ್ಭಾವ ಮಿಹುದೆನಲ್ ತಪ್ಪಲ್ಲ !

—o—

# ಅಜ್ಞಾನಂದಕಾಸುರ

ಅಜ್ಞಾನ ತಿಮಿರವೊತ್ತಿ ಜೀವನ
ಕಲುಷಿತಂ ಬಡಭಾವನೆಗಳಿಂದೆ.
ಅಜ್ಞಾನದಂಧಕಾಸುರನಂ
ಪೂಜಿಪರೆ ಎಲ್ಲೆಲ್ಲಿಯುಂ ನೋಡ !
ಭವದ ಭಂಗ ಬನ್ನಗಳಂ ಪರಿಸೆ
ಜಡಮತಿಶನೀಶ್ವರನಂ ಪೂಜಿಸಿ
ಸಂಪೋಷಿಸುವರೆ ನೆರೆ ಅರಿತರಿತು.
ಸಾಕು ಸಾಕೈ ಈ ಭವಭವಂಗಳ
ಜಡನಿದ್ದೆ. ಪರಪುಟ್ಟತೆಯಿಂದಲಿ
ಪಾರಾಗೆ ಜಡನಿದ್ದೆ ಬದಿಗೊತ್ತಿ
ನವಜೀವನಂ ಬೊಕ್ಕೊಡೆ ದೇಶ
ಸಂಪ್ರದ್ಧಿ, ಬಾಳ್ ಸಂಮೃದ್ಧಿ ನೋಣ್
ಸುಮತಿಯಿಂ ಪ್ರಜ್ಞಾನ ಸಂಮೃದ್ಧಿ
ವಿಜ್ಞಾನ ಸಂಮೃದ್ಧಿ ಭುವದಿಯೊಳ್,
ಕವಿ ಕಾವ್ಯ ಕಾನನದೊಳ್ ಅರಳ್ವ
ಮಂದಾರ ಮೊಗ್ಗಿನೊಲ್ ದಳವರಳಿ !

—o—

# ಅರಣ್ಯ ಲಕ್ಷ್ಮಿ

ಹಲಸು ಮಾವು ನೇರಿಲೆ ಕಿತ್ತಿಲೆ
ಆಲ ಬೇಲ ಬಸರೀ ಶ್ರೀಹೊನ್ನೆ
ಹಾಲಿವಾಣ ಬೂರುಗ ಸಂಪಿಗೆ
ಚೆಲ್ವ ಜಾಜಿಯು ಮೆರೆದಿಹ ವನಧಿ !

ಕಂಗು ತೆಂಗು ಕೆಂಪಿನ ಗುಲಾಬಿ
ರಂಜದ ಮರ ಪುನ್ನಾಗ ಕೇಸರಿ
ಲಿಂಬೆ ಮಾದಲ ತುಂಬಿ ತುಳುಕುವ
ಗಂಧಮಯದಿಂದೊಪ್ಪುವ ವನಧಿ !

ಅಡಸೋಗೆ ಹೊಂಬಾಳೆ ಕೇತಕಿ
ನಿಡು ಬಿದಿರು ಕಾಡುಗಣಪೆ ದವನ
ಬಿಡಿಗೊಂಡ ಜಡೆಹತ್ತಿ ಚಂದನ
ಕಡು ಮುಳ್ಳು ಕಂಟಿಗಳಿರ್ಪ ವನಧಿ !

ಮೊಲ್ಲೆ ಸೇವಂತಿಗೆ ವರ ತುಳಸಿ
ಬಿಲ್ವ ಮರುಗ ದವನ ಕನಕಾಂಬರ
ಚೆಲುವು ತುಂಬಿದ ಸುಗಂಧರಾಜ
ನೀಲ ನಿಚುಲ ಮುಂಬೆಳೆದ ವನಧಿ !

→

ಅಗಸೆ ಅಶ್ವತ್ಥ ಹಳದಿ ಬಿದಿರು
ಮರಗೆಣಸು ಚೆಂಡು ಮಲ್ಲಿಗೆ ಸುರಗಿ
ಗಿರಿಯ ಮಲ್ಲಿಗೆ ಕರ್ಣ ಕುಂಡಲ
ಪಾರಿಜಾತಗಳ್ ಬೆಳೆದ ವನಧಿ !

ಲಕ್ಕಿ ಮತ್ತಿ ಅತ್ತಿ ಎಲಚಿಗಳ್
ಎಕ್ಕೆ ಕಬ್ಬು ಇಪ್ಪೆ ಲವಂಗಗಳ್
ಚಕ್ಕೆ ಹೊನ್ನೆ ಹೊನ್ನಾರತಿ
ತೆಕ್ಕೆಯಿಸಿ ಸೊಕ್ಕಿ ಬೆಳೆದ ವನಧಿ !

ತೊಂಡೆ ಬೆಂಡೆಗಳ್ ಮುಂಬೆಳೆದು
ಚೆಂಗಾಯಿಯೊಗೆದ ಸುಂದರ ವನಧಿ
ಚೆಂದದಿಂ ಜೋಲುಬಿಳ್ದ ನುಗ್ಗೆ
ಗೊಂಚಲುಗಳಿಂ ಶೋಭಿಪ ವನಧಿ !

ಜೀವ ಜಗಕೆ ಕೊಡುಗೈ ಚಾಚಿರೆ
ದೇವಮಾತೆಯೊಲ್ ಆಶ್ರಯವಿತ್ತು
ಕಾವ ದಿವ್ಯ ಅರಣ್ಯಾನಿಯಂ
ಭವದಿ ಕಡಿದು ಕೊಲ್ವರ್ ಅಧಮರ್.

ಸಮ್ಯಕ್ ದೃಷ್ಟಿಯ ತಾಯಿಯಂ
ಸಮ್ಯಕ್ ಭಾವದ ದೇವಿಯಂ
ಸಮ್ಯಕ್ ತೇಜದ ಬಂಧುವಂ
ಸಮ್ಯಕ್ ಸ್ವಾರ್ಥ ಖಡ್ಗಕೆ ಬಲಿ
ಕೊಡುವರ್ ಹೀನ ನರರ್ !

—o—

# ಶ್ರೀ ಲಂಕಾ

ಹಾ ! ಏನಿದೇನಿದು ?
ಈ ಪರಿ ರಣದಾಹ ! ಅದ್ಭುತ ರಣದಾಹ !
ಅಂದಿಂದಿಗೂ ರಣದಾಹದ ಮೊಳಗು !
ಢಂ. ಢಂ. ಢಂ. ಢಂ. ! ಗುಂಡಿನ ಕರ್ಕಶ ಮೊಳಗು !
ಸಾಲು ಸಾಲೈಸಿ ಉರುಳುತಿವೆ ಹೆಣಗಳ ರಾಶಿ !
ನೋಡಲಾಗದ–ತಾಳಲಾಗದ ರುದ್ರ ಚಿತ್ತಾರ !
ಹೆತ್ತವರ–ಮಡದಿ ಮಕ್ಕಳ ಸಂಕಟವಂ
ಅಲಕ್ಷಿಸಿ–ನಿರ್ಲಕ್ಷಿಸಿ
ಮುಂದಿಡುತಿವೆ ಹೆಜ್ಜೆ ಸಗ್ಗ ಸಿರಿಯಂ ಬಯಸಿ.
ಸಕಾಲದಲಿ ಸಂಸ್ಕಾರಕಾಣದ
ನರದೇಹಗಳ ನಾತ ! ದುರ್ನಾತ !
ಎಲ್ಲೆಲ್ಲಿಯುಂ ನರರಾರ್ತಧ್ವನಿ !
ಹೆಂಗಸರು ಮಕ್ಕಳ ಚೀರ್ದನಿ !
ಕೊನೆಗಾಣದ ಗೋಳುದನಿ !
ಉಣಲಿಲ್ಲ ಉಡಲಿಲ್ಲದ ಕಡು ಸಂಕಟದ
ಘೋರಾತಿಘೋರ ಪರಿಪಾಡು !
ರಕ್ತ. ರಕ್ತ. ರಕ್ತ. ರಕ್ತ !
ಭುವಿಯಲಿ ಮನೆಯಲಿ
ಎಲ್ಲೆಲ್ಲಿಯೂ ರಕ್ತವೇ ರಕ್ತ !
ನರ ರುಂಡಗಳು ! ನರ ಮುಂಡಗಳು !
ಶೋಣಿತ ವರ್ಣದ ನೆತ್ತರಿನ ಜರಿಯಲಿ



ತೇಲುವ ಮಾಂಸ ಖಂಡಗಳು !
ಭೋರಿಟ್ಟು ಸುರಿವ ಮುಂಗಾರ್ಗಾಲದ
ಬಲ್ಸರಿಯಲಿ ಪಟಪಟನೆ
ಉದುರುವ ಆಲಿಗಲ್ಲುಗಳ ತೆರದಲಿ !
ಅಂಗಾಂಗಗಳುರುಳಿ ಬಿಳ್ದುವು
ಕೆನ್ನೆತ್ತರ್ ಕಾರುತ
ಪಾಪದ ಶರೀರ, ಪುಣ್ಯದ ಶರೀರ
ಅಮಾಯಕ ಶಿಶುಗಳ್
ಅಬೋಧ ಸ್ತ್ರೀ ಕುಲ
ವಿಧವಿಧ ರೂಪದಲಿ ನಾಶವಾದುದು
ದಯೆ ದಾಕ್ಷಿಣ್ಯ ಕರುಣೆ ಪ್ರೇಮ
ಮುಂತಪ್ಪ ಮಾನವೀಯ ಗುಣಗಳಿಂ
ದೂರಾಗಿ.....
ಹಲಕೆಲ ವರುಷಗಳೇ ಸಂದುವು
ಘೋರ ಯುದ್ಧರಂಗದ ಕಣದಲಿ
ಹತ್ಯಾಕಾಂಡ ನಡೆದಿದೆ ಎಡೆವಿಡದೆ.
ಧರ್ಮಕರ್ಮಗಳಿಂದ ದೂರಾಗಿ
ಜೀವನೋದ್ದೇಶ ಅಡವಿ ಪಾಲಾಗಿ
ಜೀವನ ದುಃಖಃ ಸಂಕಟಗಳ ಪಾಲಾಗಿ
ಹಸಿವು ಧಗೆಗಳಿಂದೊಡಲು ಬೆನ್ನಿಗೆ ಹತ್ತಿ
ನೋವಿನ ದಂಥೆ ನೆತ್ತಿಗೆ ಹತ್ತಿ
ಕುಟುಂಬಿಗರ ರಣಗೋಳು ರಣಗೋಳು !
ದುಃಖಃ ಸಂಕಟಗಳ ಪರಿಪಾಡು
ಪರಮಾತ್ಮ ಮಾತ್ರ ಬಲ್ಲ.
ಧರ್ಮದ ಗೇಯ—ನೀತಿಯ ರಾಗ

ಅಡವಿ ಪಾಲಾಗಿ ಪ್ರಾಣವಾಹಿನಿ
ನುಗ್ಗುತಿದೆ ನಾಕ–ನರಕಗಳ ಬಯಸಿ.....!
ಅದೋ ಬರುತಿಹ ಪಾಶವೊಗೆಯೆ ಮಹಿಷಾರೋಹಿ !
ಬೆಳ್ಳನೆ ಚಾಚಿಹ ದಾಡೆಯ ತೋರಿ
ಬರುತಿಹ ನುಗ್ಗಿ–ಜಡಿ ನುಗ್ಗಿ
ಅಸ್ತಿ ಪಂಜರವ ತಾ ಹೋಲಿ !
ಜೀವನ ರೋಸಿದ ಅವನೇ ನಿಜ ಕಲ್ಕಿ !
ನಾಗರಿಕತೆಯನು ಕೊಂದ ಕಲ್ಕಿ !
ಧರ್ಮಕರ್ಮಗಳ ಗಡಿ ದಾಟಿಸಿದ ಕಲ್ಕಿ !
ಭಾರತ ಮಾತೆಗೆ ಮಸಿ ಬಳಿದ ಕಲ್ಕಿ !
ಅವನೇ ನೋವು ನಿಡಿಗಳ ಆಳಾಗಿ !
ನೋಡಲು ರೌದ್ರಾವತಾರ !
ಬಣ್ಣಿಸೆ ವರ್ಣನಾತೀತ !
ಢಂ. ಢಂ. ಢಂ. ಢಂ ! ಘೋರ ಮೊಳಗು !
ರಕ್ತ ರಕ್ತ.........ರಕ್ತ !
ನೆತ್ತರ ದಾಹವಿನ್ನೂ ಅಡಗಿಲ್ಲ.
ಸ್ವಾರ್ಥಾಭಿಮಾನವೇ ಹೊರತು ಮತ್ತೊಂದಿಲ್ಲ.
ಓ.ವೋ ! ಜೀವೋನ್ಮಾದವ ಕಳೆಯಲೆಂದು
ಬೊಮ್ಮನ ನಾಡಿನಲಿ ದಿವ್ಯ ಪತಾಕೆ
ಹಾರಿಸಲೆಂದು !
ಸಾಗುತಿದೆ ರಣಯುದ್ಧ
ರಣರಣಿಸುವ ಮೋಜಿನಲಿ....!
ಓ ! ಮಹಾ ಪ್ರಭುವೆ !
ನಿನ್ನ ರಾಜ್ಯದಲಿ ಶಾಂತಿಗೆ ಬೆಲೆಯಿಲ್ಲವೇ ?
ಎಲ್ಲೆಲ್ಲಿಯೂ ಹುಲಿ ಸಿಂಹಗಳ ಮಾಳ್ಕೆಯುಲಿ

→

ಹುಚ್ಚಾಪಟ್ಟೆ ಕಚ್ಚಾಡುವರ್ ಗುರುಗುಟ್ಟೆ
ಅಶಾಂತಿ.....ಎಲ್ಲೆಡೆಯೂ ಅಶಾಂತಿ !
ಮಡದಿ ಮಕ್ಕಳಿಗೆ ನಿತ್ಯ ಕಣ್ಣೀರ್ ಬಾಳು !
ಕೊಚ್ಚಿ ಕಂಡರಿಸುವುದೆ ಇಂದಿನ ರೀತಿ
ಕಲಿತವರಲಿಲ್ಲ ನ್ಯಾಯ-ಧರ್ಮ !
ದೇಶದ ಶಾಂತಿಗೆಡಿಸಿ-ನೆಮ್ಮದಿಗೆಡಿಸಿ
ಮಡದಿ ಮಕ್ಕಳ ಗತಿಗೆಡಿಸಿ
ತಾವೂ ಬಾಳದೆ-ತಮ್ಮವರನ್ನೂ ಬಾಳಿಸದೆ
ಮಾನವೀಯತೆಯನ್ನೂ ಬಾಳಿಸಲಾರದೆ
ಬದುಕುವ ಇವರನೆಂತು 'ಮನುಕುಲಜರ್'
ಎನುವುದೊ ಆನರಿಯೆ ಪ್ರಭುವೇ !
ನೀನೇ ಎಲ್ಲರಿಗೂ ಸನ್ಮತಿ ನೀಡು.
ಓಂ.....ಶಾಂತಿ ಶಾಂತಿ ಶಾಂತಿ !

—o—

ಎಲ್ಲಿ ದುರ್ಬಲತೆಯೋ ಅಲ್ಲಿಯೇ
ಸ್ವಾತಂತ್ರ್ಯಹರಣ ಈ ಧರಣಿಯೊಳ್ !
ದುರ್ಬಲತೆಯ ಮಾರ್ದವ ಭಾವವಂ
ಬಗ್ಗು ಬಡಿವುದು ಸುಲಭವೆನೆ ಗಂಡರ
ಗಂಡರುಂ ಪುಟ್ಟುವರ್ ಎಡೆಎಡೆಯಲಿ !

—o—

# ನಾರೀಶ್ರೀ

ಯತ್ರ ನಾರ್ಯಸ್ತು ಪೂಜ್ಯನ್ತೇ
ರಮನ್ತೇ ತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯನ್ತೇ
ಸರ್ವಾಸ್ತತ್ರಾಫಲಃ ಕ್ರಿಯಾಃ ॥

ಭಾರತೀಯ ನಾರಿಯರ ಬಹುಮುಖ
ತೇಜೋವಧೆಗೆ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ಪುಟ್ಟನಿಂ ಕೊನೆವರಂ ಬಂಧನದ
ಬದುಕಿನಲಿ ಲೋಕಪ್ರಜ್ಞೆಯಿಂ ನೆರೆ
ದೂರಾಗಿ ತಾನೊಂದು ಮೃಗೀಯ
ಶಾಬಕದೊಲ್ ಬೆಳೆಯಲ್ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ವೈಯಕ್ತಿಕ ಆರ್ಥಿಕ ಬೌದ್ಧಿಕ
ಸ್ವಾತಂತ್ರ್ಯಮೇನೆಂದರಿಯುದಿಹ
ಮುಗ್ಧ ಸತಿ ತೊತ್ತಾಗಿ ಸೊತ್ತಾಗಿ
ಭೋಗವಸ್ತುವಾಗಿಹ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ಬಕುಳ ರಾಜಿ–೮೧

ಅಜ್ಞಾನ ಅವಿದ್ಯೆ ಅವಜ್ಞೆಗಳ
ಅಂಧಕಾರದಲಿ ಹುದುಗಿ ಬಾಳಿನ
ತೆರೆಮರೆಯಲಿ ಹಿಂಸೆಯ ಪ್ರಕಾಂಡ
ಕಾಂಡಕೆ ತಲೆ ಮಣಿಯಲ್ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಗೆ
ಪರಿಪುಷ್ಟಿಯೀಯೆ ಸಮಭಾಗಿತ್ವ
ನೀಡಿದ ಪುರುಷ ವರ್ಗ ಸ್ವಾತಂತ್ರ್ಯ
ಬಳಿಕ ಪೆಣ್ ಪಿಂತಿಕ್ಕೆ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ಸಮಯೋಚಿತ ಪ್ರಜ್ಞಾನಂ ಮೇಣ್
ಅತ್ಯಂತಿಕ ತೋಳ್ಬಲಮಂ ಮೇಣ್
ಕಾಮಾರ್ಥಗಳ ಭೋಗಿಯುಂ ಮೇಣ್
ಗಂಡುಗಲಿ ತಾನಾದ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ವಿದ್ಯೆ ಬುದ್ಧಿಗಳಿಂದೆ ದೂರಾದ
ಕಾಮಿನಿಗೆ ಕಾಮಕಾಮನೆಯ ರುಚಿ
ತೋರಿಸಿ ಕುಡಿನಾಲಿಗೆ ನೊಣೆಯುವೊಲ್
ಮೋಹ ಜಾಲದಲದ್ದೆ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ಸಧ್ಯ,   ಕಲಿತು ಕಲ್ಪ ವೃಕ್ಷದೊಲ್
ದೃಢವಾಗಿಹ ಪ್ರಾಜ್ಞೆಯರಂದಿನ
ಗೋಳ್ ಅಂದಿನಾ ನೆರೆ ಹೊತ್ತಿರಲ್
ಅಸಮಾನತೆಯ ಗೋಳ್ ಕಾರಣಂ
ಪುರುಷ ಪ್ರಧಾನವಾದ ರಾಷ್ಟ್ರಂ !

ಇಂದು ಜಾಗೃತ ಜೀವನ ಗಾದಿಗೆ
ಪಕ್ಕಾಗೆ ಎಲ್ಲವಗೆಯಲಿ ಸ್ತ್ರೀಗೆ
ಸರ್ವ ಸ್ವಾತಂತ್ರ್ಯಮಿತ್ತು ಪುರುಷರ
ಸಮಾನತೆಯನಿತ್ತೊಡೆ ಸೊಗಮುಕ್ಕು
ಪುರುಷ ಪ್ರಧಾನವಾದ ರಾಷ್ಟ್ರಂ !

ಅಂದಿಂದಿನ ಕೀಳರಿಮೆಯ ಕೆಟ್ಟ
ರಣಗೋಳು ಅಂಟಹ ಜನ ಬಣದಲಿ
ಪೆಣ್ಣು ಸರಿ ಸಮಾನತೆ ಪಡೆಯುವುದೆ
ಸುಂದರ ಸುಜೀವನಕೆ ದಾರಿ ಕಣ !
ಪುರುಷ ಪ್ರಧಾನವಾದ ರಾಷ್ಟ್ರದಲಿ !

ವಿಜ್ಞಾನ ಪ್ರಜ್ಞಾನ ತನ್ನೊಳಿರೆ
ಆತ್ಮಾಭಿಮಾನ ತುಂಬಿ ಘನಿಸಿರೆ
ಕೀಳರಿಮೆಯುಂ ಇಲ್ಲ ; ವರದಕ್ಷಿಣೆ
ಸುಡುಗಾಡಿನ ಸೂಡು ಇರಲೊಲ್ಲದು
ಪುರುಷ ಪ್ರಧಾನವಾದ ರಾಷ್ಟ್ರದಲಿ !

— o —

# ಅರಿಕೆ

ಓವೋ ! ಎನಿತೊಂದು ಕಾಲಮಾನ
ಕಳೆದುದೋ ವ್ಯರ್ಥ ಗತಿಯಲಿ ?
ಧೂಳಾಡಿ–ಮಣ್ಣಾಡಿ
ಕಾಡುಹರಟೆಯಲಿ ಕಳೆದುದು ದಿವ್ಯ ಕಾಲ !
ದೇವ ! ನಿನ್ನೊಡಗೂಡಿಯುಂ ಅರಿಯದಾದೆ
ಆನೆನ್ನ ಬೆಲೆಯಂ.
ಬಾಲ್ಯದಿಂ ನೀನಿರಲೆನ್ನ ಬಳಿಯಲಿ
ನೀನಾರೆಂದು ಅರಿತೆನಿಲ್ಲ,
ಬುದ್ಧಿಯಿದ್ದೂ ಯೋಚಿಸಿದೆನಿಲ್ಲಂ.
ನಿನ್ನೊಡನಾಡಿದೆ ಕೂಡಿ ಮಾತಾಡಿದೆ
ಆಟವಾಡಿ ನಕ್ಕು ನಲಿದೆ.
ಆದೊಡಂ,
ನಿನ್ನ ಪಾತ್ರವನಿನಿತು ಕುರಿತು ಚಿಂತಿಸಿದೆನಿಲ್ಲ.
ತೀರ ಹಗುರಾಗಿ ಭಾವಿಸಿದೆ
ಸರಾಗದಿಂ ಕಾಲಹರಣ ಗೈದೆ
ನಿನ್ನಂ ಹದವರಿತು ಉಪಚರಿಸಿದೆನಿಲ್ಲ.
ಈಗಳೀಗ ನೀನು ಮೆಲ್ಲಮೆಲ್ಲನೆ
ದೂರದೂರವಾಗುತಿಹೆ ಕಾರಣವಿಲ್ಲದೆ!
ಆನೀಗ ಬಯಸಿದೊಡಂ ಬೇಡಿದೊಡಂ
ಇರಲೊಲ್ಲೆಯೇಕೆ ?
ಕಾಡಿಬೇಡಿದೊಡಂ ಇರಲೊಲ್ಲೆಯೇಕೆ ?
ದಿನದಿನಂ ದೂರದೂರವೇ ಸರಿಯುತಿಹೆ

→

ನೀನೇ ನೀನಾಗಿ !
ಎನ್ನ ಪಾಲುವಾರಿಕೆಗೆ ಮದ್ದಿದೇಂ?
ನೀಂ ಸರಿಯುತ ಸಾಗಿಹೆ ದೂರ ಸೀಮೆಗೆ
ಹಾ, ಸೀಮಾ ಪುರುಷನೇ !
ಎರೆಂಕೆಯಿಲ್ಲದಾನು ಬಳಿಸಾರುವೆನೆ ನಿನ್ನ ?
ನೀ ನಗುತಿಹೆ ದೂರ ಸೀಮಾ ಕ್ಷೇತ್ರದಲಿ !
ನಾನಿಲ್ಲಿ ಹೊರಳಾಡಿ ಮಣ್ಣಲಿ
ಗೋಳಾಡುತಿಹೆ ನಿನ್ನ ಬಳಿ ಸೇರಲಾರದೆ !

--o--

ತನ್ನದೇ ಆದ ಸುಳ್ಳು ಪೊಳ್ಳಿನ
ಹೆಬ್ಬಂಡೆಯಂ ಎಡವಿ ಮುಗ್ಗರಿಸಿ
ಯಾರು ಬೀಳ್ವರೋ ಅವರ ರಕ್ಷಣೆ
ಕಡು ಕಷ್ಟ ಈವಿಶ್ವ ಲೋಗದಲಿ

--o--

## ನಿವೇದನೆ

ಹೇ ಎನ್ನ ಪ್ರಾಣವಲ್ಲಭನೇ!
ಎಲ್ಲಿ ನಿರ್ಭೀತಿಯಿಂ ಮನವೆನ್ನ
ನುಡಿಯ ಬಯಸುವುದೋ,
ಎಲ್ಲಿ ಎತ್ತಿದ ಶಿರವೆನ್ನ
ಕಿಂಚಿತ್ ಬಾಗಲಿಚ್ಛಿಸದೋ,
ಎಲ್ಲಿ ಪರಿಜ್ಞಾನವೆನ್ನ
ನಿತ್ಯ ಸಂಚಯ ಪ್ರಧಾನವೋ,
ಎಲ್ಲಿ ಹೃದಯದಾಳದಿಂದೆನ್ನ
ಪದ ಪುಂಜಸ್ತ್ರೋಮ ಹೊರ ಹೊಮ್ಮಲಂಜದೋ,
ಎಲ್ಲಿ ತೋಳ ಶ್ರಮದೊಳೆನ್ನ
ಪರಿಪೂರ್ಣತೆಗೊಳುವ ಗೆಯ್ಮೆ ಸಾಧ್ಯವೋ,
ಎಲ್ಲಿ ಪ್ರಸ್ಫುಟ ವಿಚಾರಶ್ರೋತವೆನ್ನ
ನಿನ್ನ ಪಾದಧೂಳಿಯಲಿ ಸೇರಿ ಹೋಹುದೋ,
ಎಲ್ಲಿ ಎನ್ನ ಭಾವನಾ ಭಾಮಿನಿ
ಮರು ಭೂಮಿಯಲಿ ಹಿಂಗಿ ಹೋಗದೋ,
ಎಲ್ಲಿ ವಿಕಸಿತ ಚಿತ್ತ ಕಲ್ಪವೆನ್ನ
ನಿನ್ನ ಧ್ಯಾನವಮಂ ನಿರ್ಭಯದಿಂಗೈವುದೋ,
ಎಲ್ಲಿ ಪ್ರತಿನಿತ್ಯ ದಿನಚರಿಯೆನ್ನ
ಹಾಳು ಹರಟೆಯಿಂ ಮುಕ್ತಗೊಳ್ವುದೋ,
ಎಲ್ಲಿ ಜೀವನ್ಮರಣವೆನ್ನ ನಿರ್ನಿಮಿತ್ತಂ
ನಿರ್ಬಂಧಕೊಳಗಾಗದೋ,

→

ಎಲ್ಲಿ ಎಡೆವಿಡದೆ ಶರಾಗದಿಂ ನಿನ್ನಯ
ಸಿರಿಪಾದ ಸೇವೆ ಲಭ್ಯವೋ ಆ ನಿನ್ನ
ಸ್ವರ್ಗಧಾಮಕೆ ಕರೆದೊಯ್ ಹೇ ಪ್ರಾಣಪ್ರಭುವೆ !
ನಿನ್ನ ಪಾದ ಪದ್ಮಗಳ ಬಳಿಯಲಿ ಇದೆನ್ನ
ನಮ್ರವಿನಮ್ರ ನಿವೇದನೆ !
ಹೇ ಎನ್ನ ಹೃದಯನಾಥನೇ !
ಕಡೆಗಣಿಸದಿರೆನ್ನ ಕೈಮುಗಿದು ಕಾಲ್ವಿಡಿದು
ಬೇಡುವೆನೈ....ಪರಮ ದೈನ್ಯದಿಂ ಬೇಡುವೆನೈ !

—o—

ಪ್ರಚುರ್ತನ ವ್ಯಷ್ಟಿಯಲಿ ವಿರಳವಿರೆ
ಸಮಷ್ಟಿಯಲಿ ರಾಷ್ಟ್ರಗಳಲಿ ಮೋಣ್
ಯುಗಯುಗಗಳಲಿ ನೀತಿಯ ನಿಯಮ !

—o—

# ಪ್ರವಾಹದ ಪರಿತಾಪ

ಭಾರತ ವರ್ಷದ ಉತ್ತರದ ಬೃಹದ್ ನದಿಗಳ್
ಪ್ರಳಯಾಂತಕತನದಿ ನಿರ್ದಯೆ ನಿರಾತಂಕ
ಭಾವದಿಂ ಭೋರ್ಗರೆದು ಜನ ಪಶು ಪಕ್ಷಿಗಳ ಪ್ರಾಣ
ಹೀರುತಿರೆ ಕಣ್ಣಿರ್ದು ಕುರುಡಾಯ್ತೆ ವಿಜ್ಞಾನ ?

ಮಳೆ–ಕುಂಭ ದ್ರೋಣಮಳೆ ಭೋರಾಡಿ ಸುರಿಸುರಿದು
ನದಿನದಗಳುಕ್ಕುಕ್ಕಿ ಹರಿದು ದಂಡೆಯನೊಡೆದು
ಊರು ಕೇರಿಗಳಿಂಗೆ ನುಗ್ಗಿ ಮನೆ ಮಠಗಳಂ
ಕೊಚ್ಚುತಿರೆ ಕಣ್ಣಿರ್ದು ಕುರುಡಾಯ್ತೆ ವಿಜ್ಞಾನ ?

ಬೃಹದ್ ಕೊಳಾಯಿಗಳ ನಿರ್ಮಿಸಿ ಕಾಲುವೆಗಳಂ
ತೋಡಿ ಪ್ರಳಯದ ಜಲರಾಶಿಯಂ ಒಣ ಭುವಿಗೆ
ಹರಿಸಿ ತಣಿಸಿ, ಹುಚ್ಚು ಪ್ರವಾಹಕ್ಕೆ ತಡೆಯಿಕ್ಕಿ
ಊರು ಕೇರಿಯ ಜೀವ ಜಂತುಗಳ ಉಳಿಸರೇಕೆ ?

ರಾಜಸ್ಥಾನದ ಒಣ ನೆಲ ತಣಿಯಲಿ ಮಹಾ ನದಿ–
ನದಗಳ ಜಲರಾಶಿ ಹರಿದು ಹಸಿರು ಮೂಡಿಸಲಿ.
ಬಡ ಜೀವ ಜಂತುಗಳ ದಾಹ ದಗೆ ನೀಗಿಸಲಿ
ತಂತ್ರಜ್ಞಾನವಿರ್ದು ದುಡಿವ ಶಕ್ತಿಯಿರ್ದು ಸೋಲು
ಸರಿಯಲ್ಲ ಕಾಣಿರೋ !

→

ಆಂಧ್ರ, ತಮಿಳುನಾಡು, ಕರ್ನಾಟಕಗಳಂಥ ಕೆಲ
ರಾಜ್ಯಗಳಲಿ ಮಳೆರಾಯನ ಕೃಪಣತೆಯಿಂ ಬಾಳು
ಬದುಕು ದುಃಖ ಸಂಕಟಗಳ ಪಾಲು ಎಂದರಿತ
ಪ್ರಜ್ಞಾನ ವಿಜ್ಞಾನ ಕಣ್ಣಿರ್ದು ಕುರುಡಾಯ್ತೆ ?
ಎಂಬುದು ಪರಮ ಪ್ರಶ್ನೆ.

ಪ್ರಕೃತಿಯ ದುರಾಗ್ರಹ ಇಂದು ನಿನ್ನೆಯದಲ್ಲ
ಕಾಲಾನುಕಾಲದಿಂ ಅನುಭವಿಸಿ ನರಳುತಿರೆ
ವಿಜ್ಞಾನವೇಕೆ ಸಮಯ ಪ್ರಜ್ಞೆ ಕಳೆಯಿತಿಂತು ?
ಭ್ರಮಂತಭ್ರಮರದೊಲ್ ವಿಚಾರಗೆಟ್ಟಿಹುದು ?
ಆಶ್ಚರ್ಯ ! ಪರಮಾಶ್ಚರ್ಯ ಕಣ !

—o—

ನಂನಮ್ಮ ಆಶೆ ಪ್ರತ್ಯಾಶೆಗಳ್
ಕೈಗೂಡಿದನಿತು ಸಂಕಷ್ಟಗಳು
ಇಮ್ಮಡಿಸಿದಪವು ನಿಜ ಜೀವನದಿ !

— o —

ಬಕುಳ ರಾಜೀ–೮೯

# ಸಬಕೋ ಸನ್ಮತಿ ದೇ ಭಗವನ್

ಮಹಾತ್ಮಾಗಾಂಧೀಜಿಯಂದು ಜನಗಣದಿಂ
ಕಡುನೊಂದು ಸಂಕಷ್ಟದಿಂ ಪ್ರಾರ್ಥಿಸಿದ ರೀತಿ
ಕರುಣಾಜನಕ ವೆನಲವರ ಜೀವ ಧ್ವನಿಯುಂ
ಗುರುತಿಸ್ಸೈ ಹೇ ಕಟು ಮನಃಚಿತ್ತಗಳ ಬಂಧು !

ಸಬಕೋ ಸನ್ಮತಿ ದೇ ಭಗವನ್ ! ಎನುತಲಿ
ಕೊರಳೆತ್ತಿ ಸಾಂಧ್ಯ ಸಭೆಯೊಳ್ ಒಕ್ಕೊರಲಿನಿಂದೆ
ಪ್ರಾಣ ಧ್ವನಿ ಮೊಳಗಿ ಗಗನ ಭೇರಿಯಾಗಲಾ
ಕಾತರಿತ ಕಂಠಗಳ ಬೇಡಿಕೆಯುಂ ಮನವೇ !

ಅಂತೆ ಆನಿಂದು ಬೇಡುವೆ ನಿನ್ನ ಪ್ರಭುವೇ !
ಸಬಕೋ ಸನ್ಮತಿ ದೇ ಭಗವನ್ ! ವರ ನರ ಜನ್ಮ
ಎತ್ತಿ ಬಂದಿಹ ಜಂತುಗಳ್ ಜಗ ಜಂಜಡಕೆ
ತಾನಾಗದವೊಲ್ ಮಾಡೈ ಹೇ ಜೀವೇಶನೇ !

ಹೇ ಪ್ರಭುವೆ ! ಕೈಮುಗಿದು ಕಾಲ್ವಿಡಿದು ಕಣ್ಣ
ಕಂಬನಿಯಲಿ ಮಜ್ಜನ ಗೈದು ನಿನ್ನ ಬೇಡುವೆನೈ
ಸಬಕೋ ಸನ್ಮತಿ ದೇ ಭಗವನ್ ! ಎಂದಾನು ನಿತ್ಯ
ಮೊರೆಯಿಡುವೆ ಹೇ ಎನ್ನ ಪರಮ ಪ್ರಾಣ ಪತಿಯೇ

—o—

# ಈ ಸೊಳ್ನುಡಿ ನನ್ನವಲ್ಲ

ಚೆನ್ನ ಕನ್ನಡವಕ್ಕಿ ಎನ್ನೆರ್ದೆಯಂ ಕುಕ್ಕಿ
ಸ್ವರರಾಗದಾಲಾಪನೆ
ಹರಿಸಿ ನಡುನಡುವೆ ನುಡಿಗೆಡದವೊಲ್
ಎಚ್ಚರಿಸುತಿರೆ ಈ ಸೊಳ್ನುಡಿ
ಎನ್ನವೆಂಬೆನೆಂತು ನಿವಿುರಿನಿಂದು ?
ಲೋಕವೆಲ್ಲ ಬಲ್ಲುದೆನೆ
ಮನ ಮಿಸುಕಿದೊಡೆ ನಿನ್ನ ಕಾಂಬಾಸೆ
ಚಿತ್ತದಲಿ ಧುಮುಧುಮಿಸಿ ಕಾತರಿಸೆ
ಈ ಸೊಳ್ನುಡಿಯು ನನ್ನವಲ್ಲ

ಎನ್ನ ಕಂಗಳಲಿ ಕಂಬನಿ ಸೋರೆ ಚಿಲುಮೆಯೊಲ್
ಕಣ್ಮನಗಳಕ್ಕರೆಯಲಿ
ಕನ್ನಡದ ಕಾಮಳ್ಳಿ ಉಲಿಯುತಿರೆ ಕನ್ನಡಿಸಿ
ಎದೆಯ ಬನದಿ ಬಲುಮೆಯುಕ್ಕಿ
ಝುರಿಯಾಗಿ ಹರಿದೊಡಡನೆಂತಾನು ನೆರೆನಂಬಿ
ಸೊಳ್ನುಡಿಯನೆನ್ನದೆಂಬೆ ?
ಕನ್ನಡವ ನೆರೆ ಕನ್ನಡಿಸಿ ಬರೆವೆನೆಂದೊಡದು
ಲೇಖಿಸಿದ ಸಮಯ ಸ್ಫೂರ್ತಿತಾನರಿದಲ್ಲದೆಯೆ
ಲೇಖವೆನ್ನದೆನಲುಂಟೆ ?

→

ನಿನ್ನ ಬಳಿ ಮಾರ್ಮಲೆವರೆ ?
ಏಕಿಂತು ಕಾಡುತಿಹಳೆಂತು ಬೇಸರಿಪೆಯಾ ?
ಮಧುರ ಕಂಠಗಾನರಸ
ಸೂಸಿ ಆಲಾಪಿಸೆ ತವಧ್ಯಾನದ ನೇಮದಲಿ
ಈರಾಗ ನನ್ನದಲ್ಲ.
ಕೋರಿಕೆಯ ದನಿ ಸೋರುತಿರಲಿಂತು ನಿನ್ನ ಪದ
ತಲದ ಧೂಳಿನಲಿ ಮುಡಿಯಂ ಮಣಿವುದಲ್ಲದೆಯೆ
ಬೇರೊಂದು ಇಲ್ಲವಯ್ಯ.

ಎದೆಯ ಹಕ್ಕಿಯ ಸರಸದ
ವಾಣಿಯುಂ ಪರಿಸಿರೆ ಘಮಘಮಿಸಿ ಸರಾಗದಲಿ
ಸಂಸ್ಕೃತಿ ಪರಿಮಳವದು
ಪಸರಿಸೆ ಮನಮನವಂ ಬೆಸೆಯುವವೊಲ್ ಭವದಲಿ
ಈ ವಾಣಿ ನನ್ನದಲ್ಲ.
ಎಲ್ಲಮಿರ್ದು ಏನಿಲ್ಲದ ರಾಗಮಯ ಬಾಳಿನ
ಕಾಮಕಾಮನೆಗಳ ಅಯಸ್ಕಾಂತದಿ ನಡೆಗೆಟ್ಟು
ಹೋದುದೆನ್ನ ಕರ್ಮ ಕಣ !

—o—

ನೀ ನೆನ್ನ ಚಿನ್ಮತಿಯ ಕಿತ್ತೆ
ಬಿಗಿದ ದೃತಿಕಂತುವನೆ ಕಿತ್ತೆ
ನಿನ್ನ ನಿಶೆಯ ವಿಲಗವ ನೊತ್ತೆ
ಸಮುಳ್ತರೆ ಮೂಡನೆ ರವಿ ?

—o—

# ಎರಡನೆಯ ಚಾರ್ಲ್ಸ್ ದೊರೆ

ಮಿನ್ನೆ ಒಂದಾನೊಂದು ಕಾಲದೊಳ್
ಇಂಗ್ಲೆಂಡ್ ದೇಶೀಯ ಎರಡನೆ ಚಾರ್ಲ್ಸ್ ದೊರೆ
ಸದ್ದಿಲ್ಲದ ಶಾಂತಿಯಿಹ ತಾಣದಲಿ
ವಿಶ್ರಾಂತಿಯಂ ಬಯಸಿ
ಹೊರವಲಯದಲಿ ಭವ್ಯ ಅರಮನೆ ನಿರ್ಮಿಸಿ
ಆಗಾಗಳಲ್ಲಿ ಮುದ್ದು ಮಡದಿ
ಅತ್ಯಂತ ರೂಪಸಿ ನೆಲ್ಲಿಯೊಡನೆ ತಣ್ಣಗೆ
ವಿಶ್ರಾಂತಿಯಂ ಪಡೆಯುತಿರ್ದಂ.
ನಿರ್ಜನ–ನೀರವ ಪ್ರದೇಶದಲಿ ಸದ್ದಿನ
ಸೊಲ್ಲು ಇನಿತೂ ಇಲ್ಲದ ಶಾಂತಿಯ ಬನದಲಿ
ರಾಜ-ರಾಣಿಯರ್ ಹಾರುವ ಹಕ್ಕಿಗಳು !
ಆ ಅದ್ಭುತ ಅರಮನೆ ಅಂದಿಂದಿಗು
ಅಂದವಂ ಕಳೆದುಕೊಳ್ಳಲಿಲ್ಲ;
ಭವ್ಯತೆಯುಂ ಮಾಸಲಿಲ್ಲ.
ಇಡೀ ಅರಮನೆ ಖಾಲಿ....ಖಾಲಿ !
ರಾಜ ವೈಭವೋಪೇತ ಸುಂದರ
ಬಂಧುರ ಅರಮನೆ..... ಖಾಲಿ !
ಇಂದದು ವಿ. ಐ. ಪಿ. ಎನಿಪ್ಪ
ದೂರದೂರದಿಂದ್ಯೈತರುವ
ಅತಿಥಿಗಳಿಗೆ ಮೋಜಿನ ಅತಿಥಿ ಗೃಹ !
ಒರ್ವೆ ಅಮೆರಿಕೆಯ ನಟಿಯೊರ್ವಳ್
ಲಂಡನ್ ನಗರಿಗೈತರೆ ಆ ಅರಮನೆಯಂ

→

ಬಿಡದಿಯಾಗಿತ್ತಂ ಅದರ ಕೇರ್ ಟೇಕರ್.
ಚಕ್ರವರ್ತಿಯ ವಿಜೃಂಭಿತ ಸುಂದರ
ಶಯನಾಗಾರ....ಹಂಸತೂಲಿಕಾ ತಲ್ಪ !
ನಟಿ ಆನಂದಾಂಬುಧಿಯಲಿ
ಮುಳುಗಿ ಮಲಗಿದಳ್ ನಿಶ್ಚಿಂತೆಯಿಂ.
ಮಧ್ಯ ರಾತ್ರಿ ಕಳೆಯಿತು.
ಶೀತಲ ಗಾಳಿ ಬೀಸತೊಡಗಿತು ತಣ್ಣಗೆ.
ಇಂದ್ರಮುಹೂರ್ತ ಅಡರಿ ಬರುತಿರೆ,
ಹೊದ್ದಿಕೆಯೊಳಗಡೆ ಮೈಮುದುಡಿದಳು ನಟಿ.
ಗಡಗಡ ನಡುಗುವ ಚಳಿಯಲ್ಲಿ
ಯಾರೋ ದೃಢವಾದ ಹಸ್ತಗಳಿಂದೆ
ಮೈ ಹಿಡಿದು ಅಲ್ಲಾಡಿಸಿ
"ನೆಲ್ಲಿ ಡಾರ್ಲಿಂಗ್ ಎದ್ದೇಳು !" ಎಂದರು.
ನಟಿಯು ಮೈ ಚಳಿಯಲ್ಲಿಯೂ ಬೆವರಿತು!
ಹೊದ್ದ ಕಂಬಳಿಯ ಸಂದಿಯಲಿ
ಕಣ್ಣುಗಳನ್ನು ಬಿರಿ ಬಿರಿ ಬಿಟ್ಟು ನೋಡಿದಳು
ರಾತ್ರಿಯ ದೀಪ ಉರಿಯುತ್ತಿದೆ.
ಅಲ್ಲಿಂದಿಲ್ಲಿಗೆ ಯಾರೋ ಓಡಾಡುತಿದ್ದಾರೆ !
ಬರೀ ಬಿಳಿಯ ಛಾಯೆ....!
ಕೂಗಲು ಬಾರದು ಬಾಯಿ
ಸ್ವರವೂ ಹೊರಡದು !
ಜೀವ ಭಯದಿಂದ ನಡುಗಿದಳು ನವ ನಟಿ !
ಎಂತು ಉಸಿರು ಹಿಡಿದಳೊ, ಇನ್ನೆಂತು
ಬೆಳಗಾದುದೋ
ಅರಮನೆಯ 'ಕೇರ್ ಟೇಕರ್ ಕಡೆಗೆ

→

ಓಡಿದಳು ಏದುಸಿರು ಬಿಡುತ್ತೆ.
ಆಗಳಾ ಮನೆಯೊಡೆಯ ಹಿರಿನಗೆಯಿಂ
ನುಡಿದನಿಂತು,
"ಕೇಳ್ ನಟಿಯೆ ! ಇದು ಮತ್ತಾರೂ ಅಲ್ಲ;
ದೊರೆ ಚಾರ್ಲ್ಸ್‌ನ ಭೂತ ! ನೆಲ್ಲಿಯವನರಾಣಿ!
ಆಗಾಗ ಹುಡುಕುತ್ತಿರುತ್ತಾನೆ !
ಅವನ ರಾಣಿಯೂ ಕೆಲವೊರ್ಮೆ
ನನ್ನ ಚಾರ್ಲ್ಸ್‌ನನ್ನು ಕಂಡಿರಾ....ಕಂಡಿರಾ !
ಎಂದು ಕೇಳುತ್ತಾ ಓಡಾಡುತಾಳ್ತೆ.
ಪಾಪ!ಬಾಳಿನಾಸೆ ತುಂಬದ ರಾಜದಂಪತಿಗಳು!"

—o—

ಸ್ತ್ರೀ ಅಹಿಂಸೆಯ ಪ್ರತಿ ಅವತಾರ
ನೊಂದು ನೋಯುತ ಪ್ರೀತಿ ಅರ್ಥಾತ್
ಶಾಂತಿಯಂ ಮೂಡಿಸುವ ಶಕ್ತಿಶ್ರೀ

— o —

ಬಕುಳ ರಾಜಿ–೯೫

# ಪೀಸಾ ಗೋಪುರ

ಜಗದ ಏಳೇಳು ಅಚ್ಚರಿಗಳಲಿ
ತಾನೊಂದೈಸಿ ಮೆರೆದಿಹ ಮಹೋನ್ನತ
ಪೀಸಾಗೋಪುರ ದಿನದಿನ ವಾಲುತ
ಜನಮನಕೆ ತುಂಬುತಿದೆ ಕಳವಳಂ !

ಇಂದಿನ ಮಾನದಂಡದ ಮಧ್ಯ
ಬಿಂದುವಿಂದೆ ಹದಿಸಾಲ್ಕಡಿ ಬಾಗಿ
ನಿಂತಿಹುದು ಮೇಣ್ ಮೆಲುಮೆಲನೆ ಇನಿ
ದಿನಿದಾಗಿ ವಾಲುತಿರ್ಪುದು ದಿಟಂ.

ಪರಿಸರದ ಜನ ಜಂಗುಳಿಯು ನಿತ್ಯ
ಚಿಂತೆಗೆತ್ತು ನೋಳ್ಪರ್ ! ವಾಲುತ್ತೆ
ವಿಜ್ಞಾನಿಗಳಿಗೊರ್ ಸವಾಲೆತ್ತು
ನಿಂದಿದೆ ಮುಟ್ಟಿದರೆ ಮುನಿ ಎಂಬಂತೆ !

ಸುಪ್ರಸಿದ್ಧ ತಾಂತ್ರಿಕ ವಿಜ್ಞಾನಿ
ಎನಿಸಿರ್ದ ಬೊನಾಜೋ ಪೀಸಾನೊ
ನೇತೃತ್ವದೊಳ್ ಗೋಪುರ ನಿರ್ಮಾಣ
ಮಾಡೊಡೇಂ ಅಂದಿಗದು ಅಪೂರ್ಣಂ

ಎಂಟು ಅಂತಸ್ತುಗಳ ಯೋಜನೆಯ
ಗೋಪುರಂ ಮೂರಂತಸ್ತಿಗೆ ಮುಗಿದು
ನಿಲ್ಲೆ ಹದಿನೈದು ವರ್ಷಗಳ ಸತತ
ಪ್ರಯತ್ನ ವೈಫಲ್ಯದಿಂ ನೊಂದಂ



ಆತಾಂತ್ರಿಕಜ್ಞಂ ಅದರ ಪೂರ್ಣ
ಗೊಳಿಸಲಾಗದಲ್ಲಿಗೆ ನಿರ್ಮಾಣ
ಕಾರ್ಯವಂ ಕೈವಿಟ್ಟು ಜನರ್ ಕಣ್
ತಪ್ಪಿಸಿಕೊಳೆ ದೇಶವನೆ ತೊರೆದನ್ !

ಗೋಪುರದ ಕಾರ್ಯವಂ ವಿಲಿಯಂ
ಶಿಲ್ಪಿವರ್ಯ ಶತ ಪ್ರಯತ್ನದಿಂ
ದೀರ್ಘಕಾಲಾವಧಿಯಲಿ ಭಂಗದಿಂ
ಪರಿಪೂರ್ಣಗೊಳಿಸಿ ಕೃತಾರ್ಥನಾದಂ !

ಸಾವಿರದ ನೂರೆಪ್ಪತ್ತ್ಮೂರರಲಿ
ಕೈಕೊಂಡ ನಿರ್ಮಾಣ ಕಾರ್ಯಗತಿ
ಸಾವಿರದ ಇನ್ನೂರೈವತ್ತರೊಳ್
ಮುಗಿದು ಜಗತ್ ಕೀರ್ತಿಯ ಪಡೆದತ್ತು !

ಏಳೆಂಟು ಶತಮಾನಗಳ ದೀರ್ಘ
ಬಾಳ್ಮೆಯಂ ಕಂಡ ಉನ್ನತೋನ್ನತ
ಪೀಸಾ ಗೋಪುರವಿಂದು ಪರಿಸರದ
ಜನಕೆ ತೀವ್ರತರ ಕಳವಳಕಾರಿ !

ಜಗತ್ತಿನ ಅದ್ಭುತಗಳಲೊಂದೆನೆ
ಪ್ರಸಿದ್ಧಿಯೊಡೆದ ಇತಾಲಿ ದೇಶದ
ಪೀಸಾಗೋಪುರ ನೇರ್ಪಡಿಸಲೆನಿತು
ಪ್ರಯತ್ನಿಸಿಯುಂ ಆಗದ ಕೃತಿ !

—o—

# ಚೆರ್ನೋಬಿಲ್ ದುರಂತ

ಸಾವಿರದೊಂಭೈನೂರೆಂಭತ್ತಾರರ
ಏಪ್ರಿಲ್ ಇಪ್ಪತ್ತಾರರ ಶನಿವಾರ.
ರಶಿಯಾ ದೇಶೀಯರ್
ಮುಂಜಾನೆಯಲಿ ಸುಖ ನಿದ್ದೆಯಲಿರೆ ನಲ್ ಕನಸಂ
ಕಾಣುತ. ತಂಗಾಳಿ ತೀಡಿತು ತಣ್ಣಗೆ
ಸುಯ್‌ಸುಯ್ಯನೆ ಜೋಗುಳವಂ ಪಾಡಿ
ಮುದ್ದುಗೈದು ಪಾಡಿ ಮಲಗಿಸುವೊಲ್
ಮುಂಜಾನೆ-ತಣ್ಪೂರೆವ ಮುಂಜಾನೆ.
ಕೀವ್ ನಗರಿಯು ಉತ್ತರೀ ತಟದಲಿ
ಪ್ರಿಪೆಚ್ ನದಿಯು ಬಳಿಯು
ಚೆರ್ನೋಬಿಲ್ ಅಣು ವಿದ್ಯುತ್ ಸ್ಥಾವರಂ
ತೆಕ್ಕನೆ ಭುಗಿಲೆದ್ದ ಅಗ್ನಿಯು
ಭೀಕರ ಕೋಪಾನಲಕೆ ಸಿಲ್ಕಿದುದು.
ಆವ ಮಾಯುಕವೊ ಇನ್ನಾವ
ಬೃಹದ್ ದೋಷವೋ
ಸುಟ್ಟು ಧಗಧಗಿಸಿತು ಸಾವಿರಾರು ಮಂದಿಯ
ಪ್ರಾಣಕೆ ಮಾರಕವಾಗಿ !
ಉಕ್ರೇನಿಯಾ ಪ್ರಾಂತ್ಯಕೆ ಘೋರ
ತಾಪಾನುತಾಪಮಂ ಚಣದೊಳ್ ನೀಡಿ.
ಅರೆ ತಾಸಿನಲಿ ಸುದ್ದಿ ಹರಡಿತು
ವಿಶ್ವದಾದ್ಯಂತ; ವಿಜ್ಞಾನಿಗಳ್
ಮೇಣ್ ಸುಜ್ಞಾನಿಗಳ್ ಮಿಡುಕಿ
ಕಂಗೆಡುವವೊಲ್ ! ಭೀಕರ ! ಭಯಂಕರ !

—o—

# ಅಧಿಕಾರಶಾಹಿ

ಅಧಿಕಾರಶಾಹಿ ಎನೆ
ಸಾಮಾನ್ಯವಲ್ತು !
ಬಹುತೇಕ ಅಧಿಕಾರೀ
ಭದ್ರಪೀಠಸ್ಥರು
ರಜೋಗುಣಗಳ ಮಹಾ
ಕೋಟೆಯು ಕಟ್ಟಿ
ನಿಚ್ಚ ಒಳ ಸಂಚಿನಲಿ
ಗೂಢಾತಿಗೂಢ
ಕುಕಾರ್ಯವ ಕೈಕೊಂಡು
ಲಂಚ ದ್ರವ್ಯಕೆ
ತನು ಮನಗಳಂ ತೆತ್ತು
ಭವ್ಯದರ ಮನೆ ಕಟ್ಟಿ
ನರಕಲೋಕದೊಳ್
ಹೆಬ್ಬಾಗಿಲ್ ಬಡಿವನ್ನ
ಸರ್ವಾಧಿಕಾರವಂ
ಚಲಾಯಿಸುವರ್ಕೈ
ದರ್ಪ-ರೋಷಗಳಿಂ
ಮಾನವತೆಯುಂ
ಬೋಂಕನೆ ಬದಿಗೊತ್ತಿ
ನಾಗರಿಕತೆಯನು
ತುಳಿದು ಗತಿಗೆಡಿಸಿ
ದಾನವಗತಿಗೆ
ತಾಂ ಶರಣಾಗಿ !

— o —

# ಬಕುಳ ರಾಜಿ

ಹಸುರುಕ್ಕಿ ಮೈಗೂಡಿ ಹಸುರಾಂತ
ಸುಂದರ ಮರದಲಿ ಪೂಮಾಲೆಗಳ್
ಪೋಣಿಸಿಟ್ಟವೊಲ್ ಸುಮಗಳ ಶೃಂಗ
ಸಭೆ ಶಾಂತಿ ಸಂದೇಶ ಸಾರುವೊಲ್ !

ನಳನಳಿಸಿ ಅರಳಿಹ ಬಕುಳ ಕುಸುಮ
ಕುಲಕೋಟಿಯು ವರ ಶೃಂಗಾರಮಯ
ಚಿತ್ತಾರ ಕಣ್ಮನವ ಸೆಳೆಯುತಿರೆ
ಮನವರಳಿ ಮುದದಿಂದೆ ಮುದ್ದಿಸಿದೆ.

ಮುಟ್ಟಿ ಮುಟ್ಟಿ ನೇವರಿಸಿದೆ ಆತ್ಮ
ತೋಷದಿಂ ಸುಖಾನಂದ ಮುದದಿಂ.
ಏಂ ದಿವ್ಯಮಾ ಧವಳ ಕೀರ್ತಿಯೊಲ್
ಬೆಳ್ಮೆಯ್ಯೊಡೆದ ಬಕುಳ ವಾರಾಶಿ !

ಮುಟ್ಟಿದೊಡೆ ನಲುಗುವುದೊ ಮೂಸಿದೊಡೆ
ಮಾಸುವುದೊ ಎಂದೆಂಬ ಸೂಕ್ಷ್ಮಮಾ
ಕೋಮಲ ಕುಸುಮವೇಶಿ ಸಣ್ಣಣ್ಣ
ಮನೋಜ್ಞಮಯ ಸಜೀವ ಹೇರಾಶಿ !



ಹಗಲುರುಳಿ ನಿಶಿ ಕಳೆದು ದಿವಸಂ
ಎಂತುರುಳ್ದುವೊ ಕೈಗೆಟುಕದವೊಲ್
ಬೆಳಗಾಗಿ ಮುಡಿಗೊಂಡು ಕಂಡೆನಾ
ಹಸಿರು ಮರದಿ ಬಾಡಿದ ಸುಮ ಕೋಟಿ !

ಧವಳಿಮಾ ಕೀರ್ತಿಯಲಿ ನರುಗಂಪು
ಸೂಸಿರ್ದ ಚಿತ್ರರಂಜಿತ ಪುಷ್ಪ
ಸಂಪತ್ತಿ ಜೋಲು ಬಿಳ್ದಿದ್ದು ಮುಖ
ಮುಡಿಯಾಗಿವೆ ಎನ್ನಂತೆ ವೊಲ್ ಕಣ !

ವೃಂತಗಳಚಿ ಚೆಲ್ಲಿದ್ರ್ದುವು ನೆಲದಲಿ
ಬಕುಳ ರಂಗೋಲಿ ಚಿತ್ರಿಸಿದವೊಲ್
ನಸು ಹಳದಿ ವರ್ಣ ಮಿಶ್ರಿತ ಪುಷ್ಪ
ವೇಶಿ ಪ್ರಭು ತಾನಗುತಿರಲೇನೆಂಬೆ ?

-- o--

# ಜೀವನೋತ್ಕರ್ಷ

ಓ ಎನ್ನ ಸಂಜೀವನದ ಸಿರಿದೊರೆಯೆ !
ಹಗಲಿರುಳು ಕನಸು ಮನಸುಗಳಲಿ
ನೀನೇ.....ನೀನೇ ! ಓ ಎನ್ನ ನಲ್ಲ !
ನಿನ್ನನೆನಿತು ನೆನೆದರೂ ತಣಿಯದು ಮನ
ಇನ್ನೆನಿತು ಬಿಗಿದಪ್ಪಿದರೂ ತಣಿಯದು ಜೀವ !
ನೀನೆನ್ನ ನಲ್ಲ. ನೀನೆನ್ನ ರನ್ನ
ನೀನೆ ದೈವ ! ನೀನೇ ಸ್ವರ್ಗ !
ನೀನೇ ಸರ್ವೇಶ !
ನೀನೇ ಪರಂಧಾಮ ! ಓ ಪರಾತ್ಪರಾ !
ನನ್ನ ಸರ್ವಸ್ವವೂ ನೀನೆ !
ಎನ್ನ ಸತ್ ಸಾಹಿತ್ಯವಾಹಿನಿಯೂ ನೀನೆ !
ಜೀವನ ಧರ್ಮವೂ ನೀನೆ !
ಪ್ರೀತಿ ವಿಶ್ವಾಸಗಳೂ ನೀನೇ !
ಕರ್ಮ ಕಾಂಡ-ಶ್ರಮಸಾಧನೆ
ಎಲ್ಲವೂ ನೀನೇ !
ಎನ್ನ ಗೀತ-ಸಂಗೀತ ನೀನೇ !
ಎನ್ನ ಜೀವನೋತ್ಕರ್ಷವೂ ನೀನೇ
ನಿನ್ನನಲ್ಲದೆ ಬೇರಾರನು ಕಾಣೆನಿಲ್ಲಿ ಪ್ರಭುವೇ !
ನೀನು ಏನಾದರೂ ಗೈ.
ಮುಳುಗಿಸುವುದಾದರೂ ಮುಳುಗಿಸು
ಏಳಿಸುವುದಾದರೂ ಏಳಿಸು !
ನಿನಗೆ ಸಮರ್ಪಿತವೀ ಜೀವನ ಕುಸುಮ !
ಓ ! ಕಾರಣ ಪುರುಷ !
ಪರಾಮರಿಸೈ ಎನ್ನ ಆತ್ಮ ನಿವೇದನೆ !

— o —

ಬಕುಳ ರಾಜಿ–೧೦೨

# ಮಲ್ಲಿಕಾ ಕೃತಿಗಳು

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ

(ಕಥಾ ಸಂಕಲನ)

೬) ಶ್ರೀಮುಖಿ
೭) ಬಹುರತ್ನಾವಸುಂಧರಾ
೮) ರತ್ನಗರ್ಭಾವಸುಂಧರಾ
೯) ವೈಶಾಖೀ ಪರ್ವ (ಅಚ್ಚಿನಲ್ಲಿ)
೧೦) ಫಾಲ್ಗುಣೀ ಪರ್ವ

(ಕವಿತಾ ಸಂಕಲನ)

೧೧) ಪೂಜಾವಸಾನ ಸಮಯೇ....!
೧೨) ಧ್ಯಾನಾವಸಾನ ಸಮಯೇ....!

(ಪೌರಾಣಿಕ ನಾಟಕ)

೧೩) ಪುಣ್ಯಪಯೋನಿಧಿ
೧೪) ಪುಣ್ಯಾಭಿಸಾರ

(ಸಾನೆಟ್ಟುಗಳು)

೧೫) ತರಂಗಿಣಿ

(ಇವುಗಳ ಪ್ರತಿಗಳು ಮುಗಿದಿವೆ)

(ಕಥಾ ಸಂಕಲನ)

೧೬) ಸುಧಾಮಣಿ

ಎರಡನೆಯ ಮುದ್ರಣಗಳು

೧೭) ರಮಣೀಮಣಿ
೧೮) ಲಿಯೋನಾ
೧೯) ಶ್ರೀಹರ್ಷಲಾ

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೨೦) ಮನೋನ್ಮಣಿ
೨೧) ಸಂತ್ರಾಸಿನಿ
೨೨) ಆಸೆಯ ಸುಳಿಯಲ್ಲಿ

(ಕವಿತಾ ಸಂಕಲನ)

೨೩) ಗಗನ ಕುಸುಮ
೨೪) ಜೀವನ ಕುಸುಮ
೨೫) ಕಸ್ತೂರಿ ಮಾಲಿಕಾ
೨೬) ಮಂದಾರ ಮಾಲಿಕಾ
೨೭) ಚಂಪಕ ರಾಜಿ
೨೮) ನಾದ ಬಿಂದು
೨೯) ವಿಜಯ ಗಾಥಾ
೩೦) ಗಾನತೀರ್ಥ
೩೧) ಬಕುಳ ರಾಜಿ
೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೩) ರಾಗಾನುರಾಗಿಣಿ
೩೪) ಉತ್ತರೋತ್ತರಣಿ
೩೫) ಮಂಗಳ ಭಾರತಿ

(ಗದ್ಯ ಕಾವ್ಯ)

೩೬) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೭) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೩೮) ದೂರ ದೇಶದಲ್ಲಿ
೩೯) ಬೆಳದಿಂಗಳ ರಾತ್ರಿ
೪೦) ವಿಶೇಷ ಸುದ್ದಿ
೪೧) ರಂಗನ ಸಾಹಸ
೪೨) ಓಹಿಯೋಜ ಸರೋವರ
೪೩) ಕೌಶಿಕನ ಗೊಂಬೆ

---

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025